## Mukhagalondige Mukhaamukhi

**Bhavachitra Parampare, an essay on portraiture**

by. K.V. Subramanyam, Artcritic
40/3, 10th Cross, Ist Main, Bapujinagar, Bangalore - 560 026.

Published by : B.T. Munirajaiah,
Registrar Karnataka Lalita Kala Akademi,
J.C. Road, Kannada Bhavana, Bangalore - 1


year of publication : 2004

No of copies : 1000

Price : 50.00

Cover Design : P.S. Kumar

Printed at :
Siddheswara Printers
Offset Printers
# 171, Opp. Hotel Vandana,
Cottonpet Main Road, Bangalore - 560 053, Ph : 6705793

# ಅಧ್ಯಕ್ಷರ ಮಾತು

ಆತ್ಮೀಯರೆ,

ಲಲಿತಕಲಾ ಅಕಾಡೆಮಿಯ ಅಧ್ಯಕ್ಷನಾಗಿ ಮೂರು ವರ್ಷಗಳಾಗುತ್ತಿದೆ. ಈ ಅವಧಿಯಲ್ಲಿ ನಾನು ಮತ್ತು ಸದಸ್ಯರ ತಂಡ, ರೂಪಿಸಿ ನಿರ್ವಹಿಸಿದ ಕಾರ್ಯಕ್ರಮಗಳನ್ನು ನಿಮ್ಮ ಮುಂದಿಡುವುದು ನನ್ನ ಜವಾಬ್ದಾರಿ ಹಾಗೂ ಸಂತೋಷದ ವಿಷಯ.

ನಾವು ಮೂರೂ ವರ್ಷಗಳು ಕಾರ್ಯಕ್ರಮಗಳನ್ನು ರೂಪಿಸುವಾಗ ಯುವ ಪೀಳಿಗೆಗೆ ಸಿಂಹಪಾಲು ನೀಡಿದ್ದೇವೆ. ಹೊಸತನವನ್ನೂ ಕಾಪಾಡಿಕೊಂಡಿದ್ದೇವೆ.

'ಯಂಗ್ ಸ್ಟ್ರೋಕ್ಸ್', 'ನಿಮ್ಮೊಂದಿಗೆ ನಾವು', 'ಮನೆಗೊಂದು ಕಲಾಕೃತಿ', 'ಜನಪದ ಶೃತಿ-ಆಧುನಿಕ ಕೃತಿ', ಯುವಕಲಾವಿದರಿಗೆ ಫೆಲೋಶಿಪ್ ಮುಂತಾದ ನವೀನ ಹಾಗೂ ಉಪಯುಕ್ತ ಕಾರ್ಯಕ್ರಮಗಳನ್ನು ರೂಪಿಸಿದ್ದೇವೆ. ಕರ್ನಾಟಕವನ್ನು ನಾಲ್ಕು ವಿಭಾಗಗಳಾಗಿ ಮಾಡಿ ಪ್ರತಿ ಕಾರ್ಯಕ್ರಮದಲ್ಲಿ ನಾಲ್ಕು ವಿಭಾಗದ ಕಲಾವಿದರಿಗೆ ಸಮಪಾಲು ದೊರಕುವಂತೆ ಮಾಡಿದ್ದು ಕಲಾವಿದರಿಗೆ ಸಂತಸ ತಂದಿದೆ.

**ಯಂಗ್ ಸ್ಟ್ರೋಕ್ಸ್ :** ಕರ್ನಾಟಕದ ನಾಲ್ಕು ವಿಭಾಗಗಳಿಂದ ಆಯ್ದ ಪ್ರತಿಭಾವಂತ ಯುವ ಕಲಾವಿದರ ಕಲಾಪ್ರದರ್ಶನವನ್ನು ಬೆಂಗಳೂರು, ಮುಂಬೈ ಮತ್ತು ನವದೆಹಲಿಯಲ್ಲಿ ಪ್ರದರ್ಶಿಸಿದ್ದೇವೆ. ಸುಂದರ ಕೈಪಿಡಿಯನ್ನು ಮುದ್ರಿಸಿದ್ದೇವೆ.

**ಮನೆಗೊಂದು ಕಲಾಕೃತಿ :** ಮಧ್ಯಮ ವರ್ಗದ ಜನರ ಮನೆಯಲ್ಲಿ ನಾಡಿನ ಕಲಾವಿದರ ಕೃತಿಗಳು ರಾರಾಜಿಸಬೇಕೆಂಬ ಉದ್ದೇಶದಿಂದ ಕಡಿಮೆ ಬೆಲೆಯಲ್ಲಿ ಕಲಾಕೃತಿಗಳನ್ನು ಮಾರಾಟ ಮಾಡಿದೆವು. ಜನರ ಉತ್ಸಾಹ ಹಾಗೂ ಪ್ರೋತ್ಸಾಹ ನಮ್ಮನ್ನು ನಿಬ್ಬೆರಗಾಗಿಸಿತು. ಐದು ನೂರಕ್ಕೂ ಹೆಚ್ಚು ಕಲಾಕೃತಿಗಳು ಮಧ್ಯಮ ವರ್ಗದ ಮನೆಗಳನ್ನು ಅಲಂಕರಿಸಿದರೆ ಅಕಾಡೆಮಿಯ ಬೊಕ್ಕಸಕ್ಕೆ ಲಕ್ಷಕ್ಕೂ ಹೆಚ್ಚು ಆದಾಯ ಬಂತು.

**ನಿಮ್ಮೊಂದಿಗೆ ನಾವು :** ಕರ್ನಾಟಕದ ಎಲ್ಲ ಕಡೆಗಳಲ್ಲೂ ಈ ಕಾರ್ಯಕ್ರಮಕ್ಕೆ ನಿರೀಕ್ಷೆಗೆ ಮೀರಿದ ಯಶಸ್ಸು ಲಭಿಸಿದೆ. ಈಗಾಗಲೇ ಎಪ್ಪತ್ತೈದು ಕಾರ್ಯಕ್ರಮಗಳನ್ನು ಪೂರೈಸಿ ನೂರರ ಕಡೆಗೆ ಹೆಜ್ಜೆ ಇಟ್ಟಿದೆ. ಕನಿಷ್ಠ ಇಪ್ಪತ್ತೈದು ಸಾವಿರ ಜನರಿಗೆ ಕಲೆಯ ಕಿರು ಪರಿಚಯವನ್ನು ಮಾಡಿಸಿದೆ.

**ಜನಪದ ಶೃತಿ-ಆಧುನಿಕ ಕೃತಿ :** ಜಾನಪದ ಬೇರುಗಳು ಗಟ್ಟಿಯಾಗಿರುವ ಹಳ್ಳಿಯಲ್ಲಿ ಆಧುನಿಕ ಚಿತ್ರಕಲೆಯನ್ನು ಎತ್ತಿನ ಬಂಡಿಗಳ ಮೇಲೆ ಚಿತ್ರಿಸಿ 'ಚಲಿಸುವ ಗ್ಯಾಲರಿ'ಗಳನ್ನು ನಿರ್ಮಿಸಿದ್ದೇವೆ.

**ಯುವ ಕಲಾವಿದರಿಗೆ ಫೆಲೋಶಿಪ್ :** ಮೂವರು ಯುವ ಪ್ರತಿಭೆಗಳನ್ನು ಆಯ್ಕೆ ಮಾಡಿ ಅವರಿಗೆ ಒಂದು ವರ್ಷದ ಅವಧಿಗೆ ತಿಂಗಳಿಗೆ ರೂ. 3000 (ಮೂರುಸಾವಿರ) ಧನಸಹಾಯ ನೀಡಿ ಸ್ವತಂತ್ರವಾಗಿ ಚಿಂತಿಸಿ ಅಭಿವ್ಯಕ್ತಿಸುವ ವಾತಾವರಣವನ್ನು ನಿರ್ಮಿಸಿಕೊಟ್ಟಿದ್ದೇವೆ.

ಈ ಎಲ್ಲಾ ಕಾರ್ಯಕ್ರಮಗಳು ಯುವಶಕ್ತಿಯ ಪಾಲಾದರೆ, ಚಿತ್ರದುರ್ಗದಲ್ಲಿ ಹಿರಿಯ ಕಲಾವಿದರ ಶಿಬಿರ, ಬೆಂಗಳೂರಿನಲ್ಲಿ ಕಲಾವಿದೆಯರ ಶಿಬಿರ, ಬೆಂಗಳೂರು ಹಾಗೂ ಗುಲ್ಬರ್ಗದಲ್ಲಿ ಗ್ರಾಫಿಕ್ ಶಿಬಿರವನ್ನು ನಡೆಸಿದ್ದೇವೆ. ಶ್ರೀ ದಂಡಾವತಿ ಮಾಸ್ತರು ಹಾಗೂ ಶ್ರೀ ಮಿಣಜಿಗಿಯವರ ಶತಮಾನೋತ್ಸವ ಕಾರ್ಯಕ್ರಮಕ್ಕೂ ಪರೋಕ್ಷವಾಗಿ ಕಾರಣಕರ್ತರಾಗಿದ್ದೇವೆ.

ಇದರೊಂದಿಗೆ ವಾರ್ಷಿಕ ಕಲಾಪ್ರದರ್ಶನ, ವಾರ್ಷಿಕ ಪ್ರಶಸ್ತಿ ಸಮಾರಂಭ, ಜಿಲ್ಲಾವಾರು ಕಲಾಶಿಬಿರ, ಪುಸ್ತಕ ಪ್ರಕಟನೆಗಳು, ಏಕವ್ಯಕ್ತಿ ಹಾಗೂ ಸಮೂಹ ಕಲಾಪ್ರದರ್ಶನಗಳಿಗೆ ಧನಸಹಾಯ ಮುಂತಾದ ಕಾರ್ಯಕ್ರಮಗಳನ್ನು ಯಶಸ್ವಿಯಾಗಿ ನಿರ್ವಹಿಸಿದ್ದೇವೆ. ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಕಾರ್ಯಕ್ರಮ, ಐಫೆಕ್ಸ್ ಕಲಾಪ್ರದರ್ಶನಗಳಿಗೆ ಸಹಯೋಗ ನೀಡಿದ್ದೇವೆ.

ಮುದ್ರಣ ಹಾಗೂ ವಿನ್ಯಾಸಗಳಲ್ಲಿ ಕಲಾತ್ಮಕತೆಗೆ ಒತ್ತುಕೊಟ್ಟು, ಕಲಾವಾರ್ತೆಯನ್ನು ವಾರ್ತಾ ಸಂಚಿಕೆಯಾಗಿಸದೆ ಸಂಗ್ರಹಯೋಗ್ಯ ಸಂಚಿಕೆಯನ್ನಾಗಿಸಿದ್ದೇವೆ.

ಹಿರಿಯ ಕಲಾವಿದರಿಗೆ ನೀಡುವ ವಾರ್ಷಿಕ ಪ್ರಶಸ್ತಿಯ ಜೊತೆಗೆ, ಕಲಾಕ್ಷೇತ್ರದ ಅಭಿವೃದ್ಧಿಗೆ ನಿಸ್ವಾರ್ಥ ಸೇವೆ ಸಲ್ಲಿಸಿದ ಚೇತನಗಳಿಗೆ 'ವಾರ್ಷಿಕ ಪುರಸ್ಕಾರ' ವನ್ನು ನೀಡಿ ಗೌರವಿಸುವುದನ್ನು ಪ್ರಾರಂಭಿಸಿದ್ದೇವೆ. ಈ ವರ್ಷ ವಾರ್ಷಿಕ ಕಲಾ ಪ್ರದರ್ಶನದಲ್ಲಿ ನೀಡುವ ಬಹುಮಾನಗಳನ್ನು ಹಿರಿಯ ಕಲಾವಿದರ ಹೆಸರಿನಲ್ಲಿ ನೀಡುವುದರೊಂದಿಗೆ ಅವರನ್ನು ಸ್ಮರಿಸುತ್ತಿದ್ದೇವೆ.

ಇಷ್ಟೆಲ್ಲಾ ಆದರೂ ಮನಸ್ಸಿನಲ್ಲಿ ಕೊರತೆ ಕೊರೆಯುತ್ತಿದೆ. ರಾಷ್ಟ್ರಮಟ್ಟದ ಕಲಾಶಿಬಿರ, ರಾಷ್ಟ್ರಮಟ್ಟದ ವಿಚಾರಗೋಷ್ಠಿ, ಕಲಾಕೃತಿಗಳ ಮಾರಾಟ ಕೇಂದ್ರ, ಹಾಸನದಲ್ಲಿ ರಾಷ್ಟ್ರೀಯ

ಕಲಾಗ್ರಾಮ, ವಿಭಿನ್ನ ಶೈಲಿಯ ಭಾವಚಿತ್ರದ ಶಿಬಿರವನ್ನು ಈ ಅವಧಿಯಲ್ಲಿ ನಡೆಸಲಾಗದಿದ್ದುದಕ್ಕೆ ನಮ್ಮ ಮನಸ್ಸುಗಳಲ್ಲಿ ಇನ್ನೂ ಅತೃಪ್ತಿ ಕಾಡುತ್ತಿದೆ. ಉಳಿದಿರುವ ಕೆಲವು ತಿಂಗಳುಗಳಲ್ಲಿ ಈ ಕಾರ್ಯಕ್ರಮಗಳನ್ನು ನಡೆಸುವ ನಮ್ಮ ಪ್ರಯತ್ನ ಸಫಲವಾದರೆ ಸಂತೃಪ್ತಿ ದೊರಕಬಹುದು.

'ಮುಖಗಳೊಂದಿಗೆ ಮುಖಾಮುಖಿ' ಭಾವಚಿತ್ರ ಪರಂಪರೆ ಶೀರ್ಷಿಕೆಯ ಅಧ್ಯಯನಯೋಗ್ಯ ಕೃತಿಯನ್ನು ನಮ್ಮ ಮನವಿಯಂತೆ ಬರೆದುಕೊಟ್ಟಿರುವ ವಿಮರ್ಶಕರಾದ ಶ್ರೀ ಕೆ.ವಿ. ಸುಬ್ರಹ್ಮಣ್ಯಂರವರಿಗೆ ಅಕೆಡೆಮಿಯ ಪರವಾಗಿ ವಂದನೆಗಳು.

ನಾವು ಮೂರು ವರ್ಷಗಳಲ್ಲಿ ಮಾಡಿದ ಕಾರ್ಯಕ್ರಮಗಳ ಪಟ್ಟಿಯನ್ನು ನಿಮ್ಮ ಮುಂದಿಟ್ಟಿದ್ದೇವೆ. ಎಲ್ಲಾ ಕಾರ್ಯಕ್ರಮಗಳಲ್ಲೂ ನಮ್ಮೊಡನೆ ಸಹಕರಿಸಿದ ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಕೇಂದ್ರ ಲಲಿತಕಲಾ ಅಕಾಡೆಮಿ, ರೀಜನಲ್ ಸೆಂಟರ್ ಚೆನ್ನೈ, ಐಫೆಕ್ಸ್, ಸಂಸ್ಥೆ, ಅಕಾಡೆಮಿ ರಿಜಿಸ್ಟ್ರಾರ್ ಶ್ರೀ ಬಿ.ಟಿ. ಮುನಿರಾಜಯ್ಯ ಮತ್ತು ಸಿಬ್ಬಂದಿ ವರ್ಗ, ಪ್ರತ್ಯಕ್ಷ ಹಾಗೂ ಪರೋಕ್ಷವಾಗಿ ಬೆಂಬಲ ನೀಡಿದ ಮಹನೀಯರಿಗೆಲ್ಲಾ ನಮ್ಮ ಧನ್ಯವಾದಗಳು.

ನನ್ನೊಡನೆ ಇದುವರೆಗೂ ಸಹಕರಿಸಿ ಉಪಯುಕ್ತ ಸಲಹೆಗಳನ್ನು ನೀಡಿದ ಸದಸ್ಯ ಮಿತ್ರರೆಲ್ಲರಿಗೂ ವಂದನೆಗಳು.

ನನ್ನ ಇಡೀ ತಂಡದಪರವಾಗಿ ಹಾಗೂ ವೈಯಕ್ತಿಕವಾಗಿ ಮತ್ತೊಮ್ಮೆ ವಂದನೆಗಳನ್ನು ಸಲ್ಲಿಸುತ್ತಿದ್ದೇನೆ.

ಏಪ್ರಿಲ್, 2004

ಪೀಟರ್ ಎ. ಲುಯಿಸ್
ಅಧ್ಯಕ್ಷರು
ಕರ್ನಾಟಕ ಲಲಿತಕಲಾ ಅಕಾಡೆಮಿ.

ನಿಮ್ಮೊಂದಿಗೆ...

ಕೆಲವು ಮಿತಿಗಳ ನಡುವೆ ಪ್ರಕಟವಾಗಿರುವ ಪುಸ್ತಕ ಇದು. ಇಲ್ಲಿ ನಮ್ಮ ಮುಖಗಳ ಪರಸ್ಪರ ಮುಖಾಮುಖಿಗೆ ಮುನ್ನುಡಿಯೂ ಆಗ ಬಲ್ಲ ಇತಿಹಾಸದ ತಡಕಾಟವಿದೆ. ಸಮಕಾಲೀನ ಸಂದರ್ಭವೂ ಇದೆ. ಭಾರತದ ಬಹುತೇಕ ಇತಿಹಾಸ ಪೂರ್ವ ಶಿಲಾಶ್ರಯ, ಗುಹೆಗಳ ಚಿತ್ರಕಲೆಯನ್ನು, ಗುಹಾಲಯ, ದೇವಾಲಯ, ಅರಮನೆಗಳ ಭಿತ್ತಿಚಿತ್ರಗಳನ್ನು ನೋಡಿ ಬಂದಿರುವ ನನ್ನ ಅನುಭವ ಇಲ್ಲಿ ನೆರವಾಗಿದೆ. ಈ ಪುಸ್ತಕ ಪ್ರಕಟವಾಗಲು ಕಾರಣರಾಗಿರುವ ಲಲಿತಕಲಾ ಅಕೆಡಮಿಯ ಅಧ್ಯಕ್ಷರು, ಸದಸ್ಯರು ಮತ್ತು ರಿಜಿಸ್ಟ್ರಾರ್‌ರವರುಗಳ ಆಸಕ್ತಿಯನ್ನು ಇಲ್ಲಿ ನೆನಪು ಮಾಡಿಕೊಳ್ಳುತ್ತೇನೆ. ಕಲಬುರ್ಗಿಯ ಎಮ್.ಎಮ್.ಕೆ. ಕಾಲೇಜ್ ಆಫ್ ವಿಷುಯಲ್ ಆರ್ಟ್ (ಲಲಿತಕಲೆಯ ಸ್ನಾತಕೋತ್ತರ ಕೇಂದ್ರ) ಗ್ರಂಥ ಭಂಡಾರದಲ್ಲಿ ಭಾವಚಿತ್ರ ಪರಂಪರೆ ಕುರಿತು ಪರಾಮರ್ಶಿಸಲು ಅಲ್ಲಿನ ಪ್ರೊ.ವಿ.ಜಿ. ಅಂದಾನಿ, ಈ ಪುಸ್ತಕದ ಚಿತ್ರ ಗ್ರಹಿಕೆಗೆ ಬ್ರಿಗೇಡ್ ರಸ್ತೆಯ 'ಆರ್ಟ್ ಆಂಡ್ ಟೆಕ್ನಾಲಜಿ' ಯ ಪ್ರಭು ಡಿಜಿಟಲ್‌ನ ಅಲ್ಲಮ ಪ್ರಭು ನೆರವಾಗಿದ್ದಾರೆ. ಸಿದ್ಧೇಶ್ವರ ಪ್ರಿಂಟರ್ಸ್‌ನ ಎಸ್. ಶಿವದೇವ್ ಈ ಪುಸ್ತಕವು ಕನ್ನಡ ದೃಶ್ಯ ಸಂಸ್ಕೃತಿಗೆ ಪೂರಕವಾಗಿರುವಂತೆ ವಿನ್ಯಾಸಗೊಳಿಸಿದ್ದಾರೆ. ಇನ್ನೂ ಹಲವರು ಹಲವು ರೀತಿಗಳಲ್ಲಿ ನೆರವಾಗಿದ್ದಾರೆ. ಈ ಎಲ್ಲ ಮಹನೀಯರಿಗೆ ನಾನು ಋಣಿಯಾಗಿದ್ದೇನೆ. ನನ್ನ ಬರವಣಿಗೆಗೆ ಪೂರಕ ಸಂದರ್ಭ ಸೃಷ್ಟಿಸುತ್ತಿರುವ ಕನ್ನಡ ಕಲಾವಲಯದ ನಿಮಗೆಲ್ಲರಿಗೂ ನನ್ನ ಕೃತಜ್ಞತೆಗಳು.

**ಕೆ.ವಿ. ಸುಬ್ರಹ್ಮಣ್ಯಂ**

ಬೆಂಗಳೂರು ಏಪ್ರಿಲ್, 2004.

# ಮುಖಗಳೊಂದಿಗೆ ಮುಖಾಮುಖಿ

ಜೀವಂತ ಮುಖಗಳೇ ನಮ್ಮ ಮುಂದೆ ನಡೆದಾಡುತ್ತ ಮುಖಾಮುಖಿಯಾಗುತ್ತಿರುವಾಗ ಗೋಡೆಗಳ ಮೇಲೆ ಭಾವ ಚಿತ್ರಗಳನ್ನು ಏಕೆ ತೂಗುಹಾಕುತ್ತೇವೆ? ಈ ಭಾವ ಚಿತ್ರ ಕಲೆಯ ಪ್ರಕಾರಕ್ಕೆ, ಪರಂಪರೆಗೆ 5000 ವರ್ಷಗಳ ಇತಿಹಾಸ ಏಕಿದೆ ? ಈ ಪ್ರಶ್ನೆಗಳಿಗೆ ಚಿತ್ರಕಲಾ ಇತಿಹಾಸದಲ್ಲಿ ಉತ್ತರಗಳನ್ನು ಹುಡುಕುತ್ತಾ ಹೋದರೆ ನಮ್ಮ ಮುಂದೆ ಆಕರ್ಷಕ ಪುಟಗಳು ತೆರೆದುಕೊಳ್ಳುತ್ತವೆ.

ಯಾವುದೇ ವ್ಯಕ್ತಿಯ ರೂಪವನ್ನು ರೇಖೆ, ವರ್ಣ, ಛಾಯಾಚಿತ್ರ ಅಥ್‌ವಾ ಶಿಲ್ಪ ಮಾಧ್ಯಮಗಳಲ್ಲಿ ರೂಪಿಸಿ ಗೋಡೆ, ಸಾರ್ವಜನಿಕ ಚೌಕ ಅಥವಾ ಛಾಯಾಚಿತ್ರ ಸಂಪುಟಗಳಲ್ಲಿ ಇರಿಸಿದರೆ ಆ ವ್ಯಕ್ತಿಯ ಬದುಕು ಸುದೀರ್ಘತೆಯನ್ನು ಆಕರ್ಷಕ ಶಕ್ತಿಯನ್ನು ಪಡೆದುಕೊಳ್ಳುವ ನಂಬಿಕೆಯೂ ಹಿಂದೊಮ್ಮೆ ಇದ್ದಿತು. ಹಾಗೆ ನೋಡಿದರೆ ಪುರಾತನ ಈಜಿಪ್ಟ್‌ನ ಜನರು (ಮೈಸೆರಿನುಸ್ ಮತ್ತು ಅವನ ರಾಣಿ ಖಾ - ಮೆರೆರ್ - ನೆಟ್ಟಿ II ಶಿಲ್ಪವನ್ನು ಇಲ್ಲಿ ಉದಾಹರಿಸಬಹುದು) ಬಹುಕಾಲ ಉಳಿಯುವಂತಹ ಶಿಲ್ಪದಲ್ಲಿ ರೂಪಿಸಿದ ಜನರ ರೂಪಗಳು ಅವರ ಆತ್ಮಗಳಿಗೆ ಆಲಯವಾಗಿರುತ್ತವೆ ಎಂದು ನಂಬಿದ್ದರು. ಈ ಆಲಯಗಳಲ್ಲಿ ಅವು ಅಮರತ್ವವನ್ನು



*ಚಿತ್ರ - 1 : ಇತಿಹಾಸ ಪೂರ್ವಕಾಲದ ಈಜಿಪ್ಟ್‌ನ ಶಿಲ್ಪ. ಮಾಧ್ಯಮ : ಬಣ್ಣ ಬಳಿದ ಜೇಡಿಮಣ್ಣು, ಎತ್ತರ : 29 ಸೆಂ.ಮೀ.*
*ಸಂಗ್ರಹ : Mamarija Brooklyn Museum, Newyork*



*ಚಿತ್ರ - 7 : ಭಾವಶಿಲ್ಪ-ಗಿಝಾ ರಾಜಕುಮಾರ ಅಂಖ್-ಹಾಫ್, ಕ್ರಿ.ಶ. 2480*

ಹೊಂದುತ್ತವೆ ಎಂದೂ ನಂಬಿದ್ದರು. ಹಾಗಿಯೆ ಶಾಶ್ವತವಾಗಿ ಉಳಿದುಕೊಳ್ಳುವ ಭಾವಚಿತ್ರ ಪ್ರಕಾರವು ಸ್ಮಾರಕವಾಗಿಯೂ ಭಾವಿಸಲ್ಪಡುತ್ತಿತ್ತು. ಐತಿಹಾಸಿಕ ಸ್ಪರ್ಶವನ್ನು ಹೊಂದಿರುತ್ತಿತ್ತು. ಶ್ರವಣಬೆಳಗೊಳದ ಗೊಮ್ಮಟೇಶ್ವರನ ಶಿಲ್ಪವನ್ನಿಲ್ಲಿ ನೆನಪು ಮಾಡಿಕೊಳ್ಳಬಹುದು.

ನಗ್ನಜಿತನ **'ಚಿತ್ರಲಕ್ಷಣ'** ದಲ್ಲಿ ಚಕ್ರವರ್ತಿಗಳ ಚಿತ್ರರಚನೆಯು ವಿವರಗಳಿದ್ದರೆ **'ವಿಷ್ಣು ಧರ್ಮೋತ್ತರ'** ದ ಚಿತ್ರಸೂತ್ರದಲ್ಲಿ ವಿವಿಧ ವರ್ಗದ ವ್ಯಕ್ತಿಗಳನ್ನು ಹೇಗೆ ಚಿತ್ರಿಸಬೇಕೆಂಬ ಸೂಚನೆಗಳಿವೆ. **'ನಾರದ ಶಿಲ್ಪ'**ದಲ್ಲಿ ಭಾವಚಿತ್ರದ ಪ್ರಸ್ತಾಪವಿದೆ. ಭವಭೂತಿಯ ಉತ್ತರರಾಮ ಚರಿತ್ರೆ, ವರಾಹಮಿಹಿರನ 'ಬೃಹತ್ ಸಂಹಿತೆ', ಕಾಳಿದಾಸನ ಕಾವ್ಯಗಳಲ್ಲಿ ಭಾವಚಿತ್ರ

ಪರಂಪರೆಯು ಮುಂದುವರೆದಿದೆ. 'ಶುಕ್ರ ನೀತಿ ಸಾರ'ದಲ್ಲಿ ಭಾವಚಿತ್ರದ ಅಸ್ವರ್ಗೀಯತೆಯ ಬಗ್ಗೆ ಪ್ರಸ್ತಾಪಿಸಲಾಗಿದೆ.[1] 'ಶುಕ್ರನೀತಿ ಸಾರ'ವು (IV. 4.76) ಧರ್ಮಶಾಸ್ತ್ರ ಪ್ರಮಾಣಕ್ಕನುಗುಣವಾಗಿ ಮೂಡಿಸುವ ದೇವತೆಗಳ ರೂಪಗಳನ್ನು ಪ್ರೋತ್ಸಾಹಿಸುತ್ತದೆ. ಮನುಷ್ಯತ್ವಕ್ಕೆ ಹತ್ತಿರವಾಗುವ ಭಾವಚಿತ್ರಣವನ್ನು ಅದು ಸ್ವರ್ಗ ವಿಮುಖ ದೃಷ್ಟಿಯದು ಎಂದು ಪರಿಗಣಿಸಿ ಖಂಡಿಸಿದೆ. ಕಾಂಬೋಡಿಯಾ ಹಾಗೂ ಜಾವಾಗಳ ವಿಗ್ರಹ ಮೂರ್ತಿಗಳ ಸೃಷ್ಟಿಯೂ ಇದೇ ದೃಷ್ಟಿಗೆ ಪೂರಕವಾಗಿದೆ. ಹೀಗಾಗಿಯೇ 'ಪ್ರತಿಮಾ ನಾಟಕ'ದಲ್ಲಿ (III.5) ಭರತನು ತನ್ನ ವಂಶಪರಂಪರೆಯ ಮಂದಿರವೊಂದಕ್ಕೆ ಭೇಟಿ ನೀಡಿದಾಗ ತನ್ನ ತಾಯಿತಂದೆಯರ ಪ್ರತಿಕೃತಿಯಂತಹ ಭಾವಚಿತ್ರಗಳನ್ನು ಗುರುತಿಸುವಲ್ಲಿ ಸೋಲುತ್ತಾನೆ. ಆದರೂ ಅವುಗಳ ಚಲನಶೀಲ ಕುಶಲತೆಗೆ ಅಚ್ಚರಿಗೊಳ್ಳುತ್ತಾನೆ. ಪ್ರತಿಕೃತಿ ಅಥವಾ ಭಾವಶಿಲ್ಪಗಳು ಮನುಷ್ಯನ ವಾಸ್ತವ ರೂಪಕ್ಕಿಂತಲೂ ದೈವೀಕರಣಗೊಂಡ ಮಾನವರೂಪಗಳಾಗಿ ಮೂಡಿಸಲ್ಪಟ್ಟಿರುತ್ತಿದ್ದವು. 'Paint not Christ' ಎಂಬತಹ ಮಾತು ಇಲ್ಲಿ ಅರ್ಥವಾಗುವಂತಹು ಆಗಿದೆ. 18 ಮತ್ತು 19 ನೆಯ ಶತಮಾನಗಳಲ್ಲಿ ಬ್ಯಾಂಕಾಕ್‌ನ ಅರಸರ



ಚಿತ್ರ - 2 : ಬಳಿಚಕ್ರದ ಇತಿಹಾಸ ಪೂರ್ವಕಾಲದ ಚಿತ್ರ.



ಚಿತ್ರ - 3 : ಬಳಿಚಕ್ರದ ಇತಿಹಾಸ ಪೂರ್ವ ಮಾನವ ರೂಪಗಳು.



*ಚಿತ್ರ - 4 : ಮಲ್ಲಾಪುರದ ಹೊಸ ಶಿಲಾಯುಗ ಸಂದರ್ಭದ ಗುಹಾಚಿತ್ರ.*

ಶಿಲ್ಪಗಳು ಅವರ ನೈಜ ಭಾವಶಿಲ್ಪಗಳೇ ಆಗಿದ್ದವು. ಇದೇ ಸಂದರ್ಭದ ಭಾರತದ ಅರಸರ ಭಾವಚಿತ್ರಗಳೂ ನೈಜತೆಗೆ ಬಹು ಹತ್ತಿರವೇ ಆಗಿವೆ. ಆದರೆ ಬ್ಯಾಂಕಾಕ್‌ನ 'ನೈಜತೆ'ಯ ಸಾಧನೆ ಒಂದು ವಿಶೇಷ ಬೆಳವಣಿಗೆಯೇ ಸರಿ. ಏಕೆಂದರೆ ಈ ಬೆಳವಣಿಗೆಯ ಪೂರ್ವದಲ್ಲಿ ಬ್ಯಾಂಕಾಕ್‌ನ ಅರಸು ಮನೆತನದ ಮೊದಲ ಮೂರು ಮಂದಿ ಅರಸರು ತಮ್ಮನ್ನು ಚಿತ್ರಿಸಲು, ಅಥವಾ ಶಿಲ್ಪಿಸಲು ಅವಕಾಶ ನೀಡಲೇ ಇಲ್ಲ! 11 ಮತ್ತು 12ನೆಯ ಶತಮಾನದ ಹೊಯ್ಸಳರ ಕಾಲದಲ್ಲಿ ಭಾವಚಿತ್ರ ಪ್ರಕಾರ ಶ್ರೀಮಂತವಾಗಿತ್ತು. ಹಾಗಾಗಿಯೇ ಸಮಕಾಲೀನ ಕನ್ನಡ ಸಾಹಿತ್ಯದಲ್ಲಿ ಭಾವಚಿತ್ರಗಳ ಉಲ್ಲೇಖ ಸಾಕಷ್ಟಿದೆ. ಕನ್ನಡ ಕವಿಗಳಾದ ಪೊನ್ನ, ರುದ್ರಭಟ್ಟರು ಚೀರಘಟ್ಟಿ ಎಂಬ ಜನಪ್ರಿಯ ಕಲಾವಿದನ ಹೆಸರನ್ನು ಪ್ರಸ್ತಾಪಿಸಿದ್ದಾರೆ. ರೂಪಸಾದೃಶ್ಯವುಳ್ಳ ಭಾವಚಿತ್ರ ಪರಂಪರೆ ಆಗ ಮುಂದುವರೆದಿತ್ತು.ಹಾಗೆಯೇ 'ಚಾಂದೋಗ್ಯ ಉಪನಿಷತ್', ಮೈತ್ರೇಯಿಯ 'ಉತ್ತರ ತಂತ್ರ' ಗಳ ಸಾಲಿನಲ್ಲಿ 'ಲಂಕಾವತಾರ ಸೂತ್ರ', 'ಶಿವತತ್ವರತ್ನಾಕರ',ಗಳನ್ನೂ ಭಾವ- ಭಾವಚಿತ್ರ-ದೈವೀಕರಣ ದೃಷ್ಟಿಗಳಿಗಾಗಿ ಗಮನಿಸಬಹುದು.

ಚಿತ್ರ - 5 : ಕುಮತಿಯ ಹೊಸ ಶಿಲಾಯುಗ -ಸಂದರ್ಭದ-ಗ್ರಾನೈಟ್ ಶಿಲಾ ಶಿಲ್ಪ.



ಚಿತ್ರ - 6 : ಈಜಿಪ್ಟ್‌ನ ರಾಜಕುಮಾರ ಹೋಟೆಪ್, ಮಾಧ್ಯಮ ಸುಣ್ಣದಕಲ್ಲು, ಖನಿಜ ಬಣ್ಣಗಳು, ಕ್ರಿ.ಪೂ. 2580

ಕ್ರಿ.ಪೂ. 300 ಕ್ಕಿಂತಲೂ ಹಿಂದೆ ಗ್ರೀಸ್‌ನ ನಾಣ್ಯಗಳ ಮೇಲೆ ದೇವತೆಗಳ ರೂಪಗಳಿರುತ್ತಿದ್ದವು ನಂತರ ಅಲೆಕ್ಸಾಂಡರ್ ತನ್ನ ರೂಪವನ್ನು ನಾಣ್ಯಗಳ ಮೇಲಿರುವಂತೆ ಮಾಡಿದ. ಹೆಚ್ಚು ಚಲಾವಣೆಯ ವಸ್ತುಗಳ ಮೇಲೂ ಆಡಳಿತಗಾರರು ಕಾಲಕಾಲಕ್ಕೆ ತಮ್ಮ ಭಾವಚಿತ್ರಗಳನ್ನು ಬಳಸುತ್ತಾ ಬಂದಿದ್ದಾರೆ. ನಾಣ್ಯಗಳು ಪ್ರತಿಸಲ ಜನರಿಂದ ಬಳಸಿದಂತೆಲ್ಲ ಬಳಕೆದಾರನಿಗೆ ಆ ರೂಪ, ವ್ಯಕ್ತಿಯ ಬಗೆ ಹೆಚ್ಚು ಹೆಚ್ಚು ನೆನಪು ಮಾಡುತ್ತಹೋಗುತ್ತವೆ. ಅಧಿಕಾರ ಹೆಚ್ಚಿಸಿಕೊಳ್ಳಲು ಕಾಲಕಾಲಕ್ಕೆ ನಾಣ್ಯಗಳೇ ಅಲ್ಲದೆ



*ಚಿತ್ರ - 8 : ಬಾದಾಮಿಯ 3ನೆಯ ಗುಹೆಯ ಮುಚ್ಚಿಗೆಯಲ್ಲಿನ ಭಿತ್ತಿ ಚಿತ್ರ,*
*ಚಾಲುಕ್ಯ : ಕ್ರಿ.ಶ. 578-579*

ಹಲವು ಮಾಧ್ಯಮಗಳ ಭಾವಚಿತ್ರಗಳು ಪ್ರದರ್ಶಿಸಲ್ಪಟ್ಟಿವೆ; ಪ್ರಸಾರ ಮಾಡಲ್ಪಟ್ಟಿವೆ. ಸಮಕಾಲೀನ ಪ್ರಚಾರದ ರಾಜಕಾರಣದಲ್ಲಿ ಈ ಪ್ರಕಾರವನ್ನು ದುರುಪಯೋಗ ಪಡಿಸಿಕೊಂಡಿರುವುದೂ ಉಂಟು. ನಮ್ಮಲ್ಲಿ ಎರಡು ರೀತಿಯ ಭಾವಚಿತ್ರ ಪ್ರಕಾರವನ್ನು ಗುರುತಿಸಲಾಗಿದೆ. ಮರಣದ ನಂತರ, ಪುರೋಹಿತ ಸಂಪ್ರದಾಯ ಮತ್ತು ಉದಾತ್ತಭಾವನೆಗಳನ್ನು ಹೊಂದಿ ಮೂಡಿ ಬರುವ ಭಾವಚಿತ್ರಗಳು ಒಂದು ಬಗೆಯಾದರೆ, ಜೀವ ಪರವಾದ, ಮತ, ಧರ್ಮಗಳಿಗೆ ಸಂಬಂಧಿಸದ, ರಸಭಾವಾತಿರೇಕದ ಭಾವಚಿತ್ರಗಳು ಮತ್ತೊಂದು ಬಗೆಯುವು.

ವಿಶಾಲ ಅರ್ಥದಲ್ಲಿ ಭಾವಚಿತ್ರ ಎಂದರೆ ನಿಜವಾದ ಅಥವಾ ಕಾಲ್ಪನಿಕ, ಜೀವಂತ ಅಥವಾ ಸತ್ತ ವ್ಯಕ್ತಿತ್ವವೊಂದರ ಶಿಲ್ಪ, ಚಿತ್ರ ಅಥವಾ ರೇಖಾಚಿತ್ರ, ಛಾಯಾ ಚಿತ್ರ ಮಾಧ್ಯಮಗಳಲ್ಲಿ ಮೂಡಿ ಬರುವ ಪ್ರತಿಬಿಂಬ. ಇಲ್ಲಿ ಆ ವ್ಯಕ್ತಿತ್ವದ ದೈಹಿಕ ಅಥವಾ ನೈತಿಕ ವಿಶೇಷ ಲಕ್ಷಣಗಳು ಅಥವಾ ಎರಡನ್ನೂ ಆ 'ಬಿಂಬಿಸುವಿಕೆ' ಹೊಂದಿರಬಹುದು. ಆಧುನಿಕ

ಸಂದರ್ಭದಲ್ಲಿ ಭಾವ ಚಿತ್ರಕಲಾ ಪ್ರಕಾರ ತನ್ನ ಐತಿಹಾಸಿಕ ಮತ್ತು ಸಾಮಾಜಿಕ ದೃಷ್ಟಿಗಳಿಂದ ಪರಿಗಣಿಸಲ್ಪಡುತ್ತಿದೆ. 'ಬಿಂಬಿಸುವ' ಸಂಪ್ರದಾಯ ಮತ್ತು ವಿಕಸನದ ವಿಧಗಳು, ಭಾವಚಿತ್ರ ಮತ್ತು ಸಮಾಜಗಳ ನಡುವಿನ ಸಂಬಂಧ, ಭಾವಚಿತ್ರ ಪ್ರಕಾರ ಪ್ರತಿ ಬಿಂಬಿಸುವ ಮತ್ತು ದಾಖಲಿಸುವ ಮನೋಭಾವ ಇತ್ಯಾದಿಗಳು ಈ ಪ್ರಕಾರದ ಬಗ್ಗೆ ಆಸಕ್ತಿ ಕೆರಳಿಸುತ್ತವೆ.



*ಚಿತ್ರ - 9 : ಪ್ರವಾದಿ ಜೆರೆಮಯನ ಭಾವಚಿತ್ರ, ಮೈಕೇಲ್ ಏಂಜಲೋ (1475-1564) ಚಿತ್ರಿಸಿರುವ ಸ್ವ-ಭಾವ ಚಿತ್ರವೆಂದು ಹೇಳಲಾಗಿರುವ ಈ ಭಿತ್ತಿ ಚಿತ್ರ ವ್ಯಾಟಿಕನ್‌ನ ಸಿಸ್ಟನಿ ಛಾಪೆಲ್‌ನಲ್ಲಿದೆ.*

ಮಾಡಲ್‌ನ 'ತೋರಿಕೆ'ಯನ್ನು ಭಟ್ಟಿ ಇಳಿಸಿದ ಬಯಾಗ್ರಫಿಯ ಅನುಭವವನ್ನು ಭಾವಚಿತ್ರದಲ್ಲಿ ತರಲು ಕಲಾವಿದನು ಮಾಡೆಲ್‌ನ ಕೆಲವು ಆಕರ್ಷಕ ಆದರೆ ಪ್ರಾಮುಖ್ಯವಲ್ಲದ ವಿವರಗಳನ್ನು ಬಿಡಬಹುದು. ಅಥವಾ ತನ್ನ ಕೊರತೆಗಳನ್ನು ಮುಚ್ಚಿಕೊಳ್ಳಲು ಮಾಡೆಲ್ ಮಾಡುತ್ತಿರಬಹುದಾದ ನಟನೆಯ ಒಳಮುಖಗಳನ್ನೂ ಬಿಂಬಿಸಿ ಬಿಡಬಹುದು. ಆದರೆ ಇಂದು ಬಹುತೇಕ ಭಾವಚಿತ್ರಗಳು ಹಣಕ್ಕಾಗಿ ಚಿತ್ರಸಲ್ಪಡುತ್ತಿರುವುದರಿಂದ ಹೀಗಾಗದೆ ಕಲಾವಿದನು ಸದಾ ಮಾಡೆಲ್‌ನ ಪೊಳ್ಳುತನ, ತೋರಿಕೆಯ ಭಾವನೆಗಳು ಹಾಗೂ ಹಣದ ಶಕ್ತಿಗಳೊಂದಿಗೆ ಹೋರಾಡುತ್ತ ಈ ಕಲಾತ್ಮಕವಲ್ಲದ ಪ್ರಭಾವಗಳನ್ನು ಅರಗಿಸಿಕೊಳ್ಳಲು ಸಾಕಷ್ಟು ಹೆಣಗಬೇಕಾಗಿದೆ.

ಭಾವ ಚಿತ್ರಣ ಪ್ರಕ್ರಿಯೆಯ ಸಂದರ್ಭದಲ್ಲಿ ಮಾಡೆಲ್‌ನ ಒಳ-ಹೊರ ನೋಟಗಳೇ ಅಲ್ಲದೆ ಚಿತ್ರಿಸುತ್ತಿರುವ ಕಲಾವಿದನ 'ಗುರುತು' ಸಹ ಅನುಭವಕ್ಕೆ ಬರುವಂತೆ ದಾಖಲಾಗುವ ಸಾಧ್ಯತೆಗಳೂ ಇವೆ[2]. ಭಾವಚಿತ್ರ ಪ್ರಕಾರ ತನ್ನ ಕಾಲವನ್ನು ಹೆಚ್ಚಿನ ತೀವ್ರತೆ ಹಾಗೂ



*ಚಿತ್ರ - 10 : ವ್ಯಕ್ತಿಯೊಬ್ಬನ ಭಾವಚಿತ್ರ ಮೊಗಲ್ ಶೈಲಿ, 17ನೆಯ ಶತಮಾನದ ಮೊದಲಾರ್ಧ*

ಸ್ಪಷ್ಟತೆಗಳಿಂದ ಅಭಿವ್ಯಕ್ತ ಪಡಿಸಬಲ್ಲದು. ಕುಳಿತುಕೊಂಡಿರುವ 'ಮಾಡೆಲ್' ನ ಸುತ್ತಲಿನ ಸನ್ನಿವೇಶ, ಅವನ/ಅವಳ ಮುಖದ ಭಾವನೆಗಳು, ಉಡುಪುಧರಿಸುವ ಅಭಿರುಚಿ ಇತ್ಯಾದಿಗಳನ್ನು ಆ ನಿರ್ದಿಷ್ಟ ಕಾಲ ಪ್ರಭಾವಿಸುತ್ತದೆ. ಹೀಗಾಗಿ ಕುಳಿತುಕೊಂಡಿರುವವನೇ 'ವಸ್ತು'. ಕಲಾವಿದನ ಸಮಕಾಲೀನತೆಯೇ ಮಾಡೆಲ್ ಆಗಿ ಕುಳಿತುಕೊಂಡಿರುವ 'ಅವನು' ಅಥವಾ 'ಅವಳು'. ಪ್ರತಿಯೊಬ್ಬ ಮಾಡೆಲ್ ತನ್ನ ಕಾಲದ ಬದುಕಿನ ಶೈಲಿಯನ್ನು ಪ್ರತಿಫಲಿಸಬಲ್ಲನು/ಳು. ಆ ನಿರ್ದಿಷ್ಟ ಕಾಲದ ಒಪ್ಪಿತ ಶೈಲಿಯಲ್ಲಿ ಮಾತ್ರ ತನ್ನನ್ನು ಕಲಾವಿದನ ಮುಂದೆ ಬಿಂಬಿಸಬಲ್ಲನು/ಳು. ಆಗ ಭಾವಚಿತ್ರದ ಸಮಕಾಲೀನ ಬೇರುಗಳು ಕಲಾವಿದ ಹಾಗೂ ಕಲಾಕೃತಿಯ ವಸ್ತುವಾದ 'ಮಾಡೆಲ್'ನ ಮೂಲಕವೂ ಚಿತ್ರದ ಅವಕಾಶದಲ್ಲಿ ಬೆಳೆಯುವುದೂ ಸಾಧ್ಯವಾಗುತ್ತದೆ.

ಸಾಮಾನ್ಯ ನೋಡುಗನೊಬ್ಬನು ಭಾವಚಿತ್ರವೊಂದರಲ್ಲಿ ವ್ಯಕ್ತಿಯ ಮುಖದ ಲಕ್ಷಣ, ಹೊರ ರೇಖೆಗಳ 'ನೈಜತೆಯ-ನಕಲು' ಹುಡುಕಿದರೆ, ಕಲಾವಿದನು ಮಾಡೆಲ್‌ನ ವ್ಯಕ್ತಿತ್ವದಲ್ಲಿನ ಸಾರಭೂತವಾದ ವಿಶಿಷ್ಟ ಗುಣಲಕ್ಷಣಗಳಿಗೆ ಗಮನನೀಡುತ್ತಾನೆ. ಈ 'ನೈಜ' ತೋರುವಿಕೆ ಸಾಮಾನ್ಯ ನೋಡುಗನಿಗೆ ಹಾಗೂ ಕಲಾವಿದನಿಗೆ ಒಂದೇ ಆಗಿರುವುದಿಲ್ಲ. ಆ ವ್ಯಕ್ತಿಯ ಎಲ್ಲ ವಿರೋಧಾಭಾಸಗಳ ನಡುವೆಯೂ ಆ ವ್ಯಕ್ತಿಯ ವ್ಯಕ್ತಿತ್ವವನ್ನು ಪ್ರಭಾವಿಸುವ ಅವನ ಒಂದು ಅಥ'ವಾ ಹಲವು ವಿಶಿಷ್ಟಲಕ್ಷಣಗಳ ಹೋಲಿಕೆ ಅಥವಾ ಸಾದೃಶ್ಯಗಳನ್ನು ಹಿಡಿದಿಡಲು ಕಲಾವಿದನು ಪ್ರಯತ್ನಿಸುತ್ತಾನೆ.

*ಚಿತ್ರ - 11 : ತಂದೆ ಅಕ್ಬರನ ಭಾವಚಿತ್ರವನ್ನು ಎತ್ತಿ ಹಿಡಿದಿರುವ ಜಹಾಂಗೀರ್‌ನ ಅಧಿಕೃತ ಭಾವಚಿತ್ರ. ಕಾಲ ಸುಮಾರು 1599.*





ಚಿತ್ರ - 12 : ಬಿಜಾಪುರದ ಷಾ ಆದಿಲ್, ಎರಡನೆಯ ಇಬ್ರಾಹಿಂನ ಭಾವಚಿತ್ರ.

ಕಾಲವು ತಾನೇ ಭೂದೃಶ್ಯ, ಬೆತ್ತಲ ಚಿತ್ರ, ಸ್ತಿತ ಜೀವ, ಅಥವಾ ಧಾರ್ಮಿಕ ಚಿತ್ರಕೃತಿಗಳ ವಸ್ತುವನ್ನು ಪ್ರಭಾವಿಸಲಾರದು ಆದರೆ ಕಲಾವಿದನು ತನ್ನ ಕಾಲಕ್ಕೆ ತಕ್ಕ ರೀತಿಯಲ್ಲಿ ಸೌಂದರ್ಯಾತ್ಮಕ ಮೌಲ್ಯಗಳಿಗೆ ಅನುಗುಣವಾಗಿ ಈ ಎಲ್ಲವುಗಳನ್ನೂ 'ಹೇಗೆ ತೋರಿಸಬೇಕೆಂದು' ಅಥವಾ ಅವು ನೋಡುಗರಿಗೆ 'ಹೇಗೆ ಕಾಣಿಸಬೇಕೆಂಬ ಹೊಂದಾಣಿಕೆ' ಯಿಂದ ಸಂಯೋಜಿಸುತ್ತಾನೆ.

ಲ್ಯಾಟೀನ್ ಭಾಷೆಯ ಕ್ರಿಯಾಪದ Protrohoವನ್ನು ಮಧ್ಯಯುಗದಲ್ಲಿ 'ಪುನರ್‌ಸೃಷ್ಟಿಸು' ಅಥವಾ 'ನಕಲು ಮಾಡು' ಎಂಬ ಅರ್ಥದಲ್ಲಿ ಬಳಸಲಾಗುತ್ತಿತ್ತು. 18ನೆಯ ಶತಮಾನದಲ್ಲಿ ಫ್ರೆಂಚ್ ಭಾಷೆಯ Po (u)rtraire ಬಳಕೆಯಲ್ಲಿಲ್ಲದೆ ಹೋಯಿತು. 'Portrait' 12ನೆಯ ಶತಮಾನದಿಂದ ಬಳಕೆಯಲ್ಲಿದೆ. 'portrai (c)ture' 12 ಮತ್ತು 13 ನೆಯ ಶತಮಾನಗಳಿಂದ ಬಳಕೆಯಲ್ಲಿದೆ. ಹೀಗಾಗಿ ಇಂಗ್ಲೀಷಿನ "portray" "portrait" ಮತ್ತು 'portriture' ಜರ್ಮನ್ ಭಾಷೆಯ 'portrat' ಮತ್ತು ರಷ್ಯನ್ ಭಾಷೆಯ 'portret' ಪದಗಳೂ ಬಳಕೆಯಲ್ಲಿವೆ.

ಈ ಸಂಬಂಧಿತ ಲ್ಯಾಟಿನ್ ಕ್ರಿಯಾಪದ 'retraho' ದಿಂದ ಇಟಲಿ ಭಾಷೆಯ 'retratto' ಮತ್ತು 'ritrarre' ಪದಗಳು ನಕಲು ಮಾಡುವಿಕೆ ಅರ್ಥದಲ್ಲಿ ಹುಟ್ಟಿಕೊಂಡಿದ್ದು 16ನೆಯ ಶತಮಾನದ ಆರಂಭದಿಂದಲೇ ಬಳಕೆಯಲ್ಲಿವೆ. 17ನೆಯ ಶತಮಾನದಿಂದ ಬಳಕೆಯಲ್ಲಿರುವ ಸ್ಪಾನಿಷ್ ಭಾಷೆಯ 'retrato' ದಿಂದ ಮೂಡಿಬಂದಿರುವ 'ritratto' ಹೇಗೂ 'portrait' ಅರ್ಥದಲ್ಲಿ ಸಾಮಾನ್ಯವಾಗಿ ಒಪ್ಪಿತವಾಗಿದೆ.



*ಚಿತ್ರ - 13 : ಬಿಜಾಪುರದ ಆಸರ ಮಹಲಿನ ಭಿತ್ತಿ ಚಿತ್ರ.*

ಭಾವ ಚಿತ್ರಕಲ್ಪನೆ ಬದಲಾದಂತೆಲ್ಲ ದೃಶ್ಯಕಲೆಯ ಪರಿಭಾಷೆಯಲ್ಲಿ ಈ ಎಲ್ಲ ಪದ ರೂಪಗಳೂ ತಮ್ಮ ರೂಪನಿಷ್ಪತ್ತಿಗಳೊಂದಿಗೆ ಹಲವು ಅರ್ಥಗಳನ್ನು ಹೊಂದುತ್ತ ಬಂದಿವೆ. ವಿಶಾಲಾರ್ಥದಲ್ಲಿ 'Image' ಮತ್ತು 'Imitation' ಎರಡನ್ನೂ ಪರಸ್ಪರ ಬದಲಿಯಾಗಿಯೂ ಬಳಸಲಾಗುತ್ತಿತ್ತು. 16ನೇ ಶತಮಾನದ ಮಧ್ಯಭಾಗದಲ್ಲಿ ದೃಶ್ಯಕಲೆಯ ಬರೆಹಗಾರರು 'Imitating' ಮತ್ತು 'Portraying' ನಡುವೆ ಅತಿ ಸೂಕ್ಷ್ಮವಾದ ವ್ಯತ್ಯಾಸವನ್ನು ಕಂಡುಕೊಳ್ಳಲಾರಂಭಿಸಿದರು. ಭಾವ ಚಿತ್ರಕಲೆಯು ಕಲ್ಪನಾತ್ಮಕ ಬದುಕು ಮತ್ತು ಅದನ್ನು ಹೆಚ್ಚು ಕಡಿಮೆ ಬೆಲೆಕಟ್ಟಿ ನೋಡುವಿಕೆ ಅದರ ಇತಿಮಿತಿಗಳು ಮತ್ತು ಆಕರ್ಷಣೆಗಳು ಆಯಾಕಾಲವು ಕಾಣುವ ಗುಣಲಕ್ಷಣಗಳನ್ನು ಅವಲಂಬಿಸಿಯೇ ಉಂಟಾಗಿವೆ. ಕಲಾವಿದನೊಬ್ಬ ಸಾದೃಶ್ಯ ಅಥವಾ ಸಾಮ್ಯತೆಯನ್ನು ಯಾವ ಹಂತದವರೆಗೂ ಗ್ರಹಿಸಬಹುದು? ಯಾವ ರೀತಿಯಲ್ಲಿ ಮತ್ತು ಎಲ್ಲಿಯವರೆಗೆ ಕಲಾವಿದ ಈ ಅಂಶವನ್ನು ಬಿಡಲು ತಯಾರಿರುತ್ತಾನೆ?



*ಚಿತ್ರ - 14 : ಮುಮ್ಮಡಿ ಕೃಷ್ಣರಾಜ ಒಡೆಯರ್, ಮಾಧ್ಯಮ : ಜಲವರ್ಣ, 1861.*

ಎಷ್ಟರ ಮಟ್ಟಿಗೆ ತನ್ನ 'ಮಾಡೆಲ್'ಅನ್ನು ಕಲಾವಿದನೊಬ್ಬ ಆದರ್ಶೀಕರಿಸಬೇಕು ? ಅದರ ಕೊರತೆಗಳನ್ನು ಆದರ್ಶೀಕರಿಸ ಬೇಕೇ? ಅಥವಾ ಅವನ್ನು ಉತ್ಪ್ರೇಕ್ಷಿಸಬೇಕೇ? ಕಲಾವಿದನ ಆ ಸಂದರ್ಭದ ಮನಸ್ಥಿತಿ, ಒತ್ತಡಗಳು ಪ್ರಭಾವ ಬೀರುತ್ತವೆಯೇ? ಇತ್ಯಾದಿ ಪ್ರಶ್ನೆಗಳು ಭಾವಚಿತ್ರವನ್ನು ಚಿತ್ರಿಸುವಲ್ಲಿ ಬಹಳ ಪ್ರಭಾವಿಸಿವೆ. ಇಲ್ಲಿ 'ಮಾಡೆಲ್' ಆಗಿ ಕುಳಿತಿರುವ ವ್ಯಕ್ತಿಯ ಇತಿಹಾಸ, ಸಮಕಾಲೀನ ಸಾಮಾಜಿಕ, ಸಾಂಸ್ಕೃತಿಕ ಸಂದರ್ಭಗಳೂ ಭಾವಚಿತ್ರ ಚಿತ್ರಣದ ಉದ್ದೇಶದ ಹಿಂದೆ ಪ್ರಭಾವ ಬೀರುತ್ತದೆ.

ಆದಿ ಮಾನವರ ಕಲೆಯ ಅಭಿವ್ಯಕ್ತಿಯಲ್ಲಿನ ರೂಪ-ಭಾವಚಿತ್ರಗಳು ಗುಂಪನ್ನು ಉದ್ದೇಶವಾಗಿಟ್ಟುಕೊಳ್ಳದೆ ನಿರ್ದಿಷ್ಟ ವ್ಯಕ್ತಿಗಳನ್ನೇ ಉದ್ದೇಶವಾಗಿಟ್ಟುಕೊಂಡು ಚಿತ್ರಿಸಲ್ಪಟ್ಟಿವೆ. ಬಹು ಹಿಂದೆ ಮಾನವ ರೂಪವನ್ನು ಗ್ರಹಿಸಿರುವ ರೀತಿಯಲ್ಲಿ ಕ್ಯಾರಿಕೇಚರ್ ಲಕ್ಷಣಗಳು ಅನುಭವಕ್ಕೆ ಬರುತ್ತವೆ. ಆ ಕಲಾವಿದರು (?) ಚಿತ್ರಿಸಿರುವ ಮಾನವರೂಪಗಳಲ್ಲಿ ವಿಶಿಷ್ಟ ರೀತಿಯಲ್ಲಿ ನಿರ್ದಿಷ್ಟ ದೇಹಭಾವಗಳ ಭಾಷೆಯನ್ನು ಗಮನಿಸಿರುವಂತಿದೆ; ಚಿತ್ರಿಸುವ ವ್ಯಕ್ತಿಗಳ ವ್ಯಕ್ತಿತ್ವವನ್ನು ರೂಪಿಸುವ ನೈತಿಕ ಅಥವಾ ದೈವೀಕ ಮನೋಭಾವಗಳಿಗೆ ಹೆಚ್ಚಿನ ಒತ್ತು ನೀಡಿಲ್ಲ.

ಮಾನವ ರೂಪವೂ ಸಹ ಒಂದು ಸಂಸ್ಕೃತಿಯಿಂದ ಮತ್ತೊಂದು ಸಂಸ್ಕೃತಿಗೆ, ಭೂಭಾಗದಿಂದ ಭೂಭಾಗಕ್ಕೆ ಅಲ್ಪಸ್ವಲ್ಪ ವೈಶಿಷ್ಟ್ಯಗಳನ್ನು ಲೇಪಿಸಿಕೊಂಡಿರುತ್ತದೆ. ಈ ರೂಪಗಳಲ್ಲಿ ಇಂದಿನ ಭಾವಚಿತ್ರಕಲಾಪ್ರಕಾರದ ನಿಷ್ಕೃಷ್ಟತೆ ಮತ್ತು ವೈಯಕ್ತೀಕರಣಗೊಳಿಸುವ ನಿರ್ದಿಷ್ಟತೆಗಳನ್ನು ನಾವು ಕಾಣಲಾರವು. ಹೀಗಾಗಿಯೇ ಮಧ್ಯಭಾರತದ ಭೀಂಬೇಟ್ಕಾ, ದಕ್ಷಿಣದ ಪಾಂಡಿಚರಿ ಬಳಿಯ ಕೀಳ್‌ವಾಳೈ, ರಾಯಚೂರಿನ ಕುಮತಿಯ ಗ್ರಾನೈಟ್ ಶಿಲ್ಪಗಳು, ಬಳಿ ಚಕ್ರದ ಮಾನವ ರೂಪಗಳು, ಹಂಪೆಯ ಆನೆಗೊಂದಿ ಸಮೀಪದ ಮಲ್ಲಾಪುರದ ಖಾನ್‌ಸಾಹೇಬ್ ಚಿತ್ರಗಳು ವಿಶಿಷ್ಟ ಎನ್ನಿಸುತ್ತವೆ.

ಈ ಭಾವಚಿತ್ರ, ಶಿಲ್ಪಗಳು, 'Model' ಗಳನ್ನು ಮುಂದಿಟ್ಟುಕೊಂಡು ಸೃಷ್ಟಿಸಿರುವವು ಗಳಲ್ಲ. ಆದಿಮ ಜನರಿಗೆ 'ಭಾವಚಿತ್ರ'ವೆಂದರೆ ಮಾಂತ್ರಿಕತೆ ಮತ್ತು ಧಾರ್ಮಿಕತೆಗಳ ಪರಸ್ಪರ ಸಹಸಾಂಬಂಧಿಕ ಸೃಷ್ಟಿಪ್ರಕ್ರಿಯೆ. ಈ ಕಲ್ಪನೆ ಯೂರೋಪು ಹಾಗೂ ಪಶ್ಚಿಮದ ರಾಷ್ಟ್ರಗಳಿಗೆ



*ಚಿತ್ರ - 15 : ತಂಜಾವೂರು ಮರಾಠಾ ಆಳ್ವಿಕೆಯ ಸಂದರ್ಭದ ಒಂದು ಭಿತ್ತಿ ಚಿತ್ರ*



*ಚಿತ್ರ - 16 : ಸ್ವ-ಭಾವಚಿತ್ರ, ಟೈಟಾನ್, ಮಾಧ್ಯಮ : ತೈಲವರ್ಣ, 1550.*

ಬರುವ ಸಾಧ್ಯತೆ ಇಲ್ಲ. ಗಬನ್ ಆದಿಮ ಕಲೆಯಲ್ಲಿ ಕಾಣುವ ಮುಖವಾಡಗಳು ಅವುಗಳ ಸೃಷ್ಟಿಗೆ ಕಾರಣರಾದ ಕಲಾವಿದರು ತಾವೇ ಕದ್ದು ತಂದ ಹೆಣ್ಣಿನ ಮುಖಗಳ ವಾಸ್ತವಿಕವಾದ ಭಾವ ಶಿಲ್ಪಗಳೇ ಆಗಿವೆ. ಆ ಜನಕ್ಕೆ ಅವು ಮಾಂತ್ರಿಕ-ಧಾರ್ಮಿಕ ಸಂವೇದನೆಗಳ ಕಾರಣಕ್ಕಾಗಿ ಭಾವಚಿತ್ರಗಳಾಗಿ ಕಂಡಿವೆ. ಕಲೆಯ ದೃಷ್ಟಿ, ಉದ್ದೇಶ ಇಲ್ಲ. ಇಲ್ಲಿ ಮುಖ ಸಾಮುದ್ರಿಕೆಯ (Physiognomy) ನಿಷ್ಕೃಷ್ಟತೆಯನ್ನು ಅರಗಿಸಿಕೊಂಡು ವ್ಯಕ್ತಿಗಳ ವೈವಿಧ್ಯಮಯ



*ಚಿತ್ರ - 17 : ಸ್ವ-ಭಾವಚಿತ್ರ, ರೆಂಬ್ರಾಂಟ್ ಮಾಧ್ಯಮ : ತೈಲವರ್ಣ, 1660.*

ಮುಖವಾಡಗಳನ್ನು ಸೃಷ್ಟಿಮಾಡುವಲ್ಲಿ ಅವುಗಳನ್ನು ಸೃಷ್ಟಿಸಿದವರ ಆಸಕ್ತಿ ಹಾಗೂ ಕುಶಲತೆಗಳು ಅನುಭವಕ್ಕೆ ಬರುತ್ತವೆ.

ಪುರಾತನ ಮಧ್ಯಪೂರ್ವರಾಷ್ಟ್ರಗಳ ಕಲೆಯಲ್ಲಿ ಮಾನವರೂಪಗಳನ್ನು ಮಂಡಿಸಲಾಗಿರುವ ರೀತಿಯಲ್ಲಿ ಅದು ನಿರ್ದಿಷ್ಟ ಗುರುತಿನ ವ್ಯಕ್ತಿಯನ್ನು ಚಿತ್ರಿಸಿರುವಂತಿದೆ ಯಾದರೂ ಗಣನೀಯ ವ್ಯತ್ಯಾಸಗಳನ್ನು ಈಜಿಪ್ಟ್ ಹಾಗೂ ಮೆಸಪೊಟೇಮಿಯಾ

ಭಾವಚಿತ್ರಕಲೆಯಲ್ಲಿ ಗುರುತಿಸಬಹುದು.[3] ನಂತರದ ಹಲವು ಶತಮಾನಗಳ ಅಂತರದಲ್ಲಿ ಗ್ರೀಕ್ ಪ್ರಭಾವಕಲೆಯಲ್ಲಿ ಕಾಣಿಸಿಕೊಂಡ ಸಂದರ್ಭ. ಅಂದಿನ ಇತಿಹಾಸವನ್ನು ಪ್ರಭಾವಿಸಿದ ಆಗಸ್ಟ್‌ಸ್‌ನ ಭಾವ ಶಿಲ್ಪಗಳು, ಜೂಲಿಯೋ-ಕ್ಲಾಡಿಯನ್ ಕುಟುಂಬದ ಭಾವ ಚಿತ್ರಗಳು ಶ್ರೀಮಂತಿಕೆಯ ಆಡಂಬರದ ಲಕ್ಷಣಗಳನ್ನು ಹೊಂದಿದ್ದವು. ಆಳೆತ್ತರದ ಭಾವಶಿಲ್ಪಗಳೇ ಅಲ್ಲದೆ ಪ್ರಿಂಟ್ ಮಾಧ್ಯಮದ ಲೋಹದ ಹಾಳೆಗಳ ಮೂಲಕ ಕೊರೆದು ಪಡೆದ ಪುಟ್ಟ



*ಚಿತ್ರ - 18 : ಸ್ವ-ಭಾವಚಿತ್ರ, ಫ್ರಾನ್ಸಿಸ್ ಜೋಸ್ ಡೆ ಗೋಯಾ,*
*ಮಾಧ್ಯಮ : ತೈಲವರ್ಣ, 1808-1813,*

ಭಾವಚಿತ್ರಗಳೂ ಗಮನಿಸುವಂತಿವೆ. ಕ್ರಿ.ಶ. 2 ಮತ್ತು 3 ನೆಯ ಶತಮಾನಗಳಲ್ಲಿ ಅಲ್ಲಿನ ಅಮಾನವೀಯ ಆಕ್ರಮಣಗಳ ಫಲ ಅಲ್ಲಿನ ಜನರ ಭಾವನೆಗಳಲ್ಲೂ ಕಾಡಿದೆ. ಬಹುತೇಕ ಭಾವಚಿತ್ರಗಳು ನೋವು, ಗಾಬರಿಗಳನ್ನು ವ್ಯಕ್ತಮಾಡುತ್ತವೆ.



*ಚಿತ್ರ-19 : ಸ್ವ-ಭಾವಚಿತ್ರ, ಡೆಲಾ ಕ್ರೊಯಿಕ್ಸ್, (1798-1863) ಮಾಧ್ಯಮ : ತೈಲವರ್ಣ.*

ಈಜೀಪ್ಟ್ ಜನರಿಗೆ ಭಾವ ಚಿತ್ರಣ ಮಾಂತ್ರಿಕತೆಯನ್ನು ಹೊಂದಿದ ನಂಬಿಕೆಯಿತ್ತು. ಹೀಗಾಗಿ ಮಾಡೆಲ್‌ನ ಹಾಗೆಯೇ ಭಾವಚಿತ್ರ, ಅಥವಾ ಶಿಲ್ಪ ಇರಬೇಕಾಗಿರಲಿಲ್ಲ; ಅವನ/ಅವಳ ಮುಖದ ಮುಖ್ಯ ಚಹರೆ ಗುರುತುಗಳನ್ನು ಹೊಂದ ಬೇಕಾಗಿರಲಿಲ್ಲ.

ಕ್ರಿ.ಪೂ. 5ನೆಯ ಶತಮಾನದ ಮೊದಲಾರ್ಧಭಾಗದವರೆಗೂ ಗ್ರೀಸ್‌ನಲ್ಲಿ ಏಕವ್ಯಕ್ತಿಯ ಭಾವಚಿತ್ರ ಕಲ್ಪನೆ ಇರಲಿಲ್ಲ. ಆ ಮುನ್ನ ಸೃಷ್ಟಿಯಾಗಿದ್ದ ಭಾವಚಿತ್ರಗಳೆಲ್ಲಾ ಗುಂಪಿನಲ್ಲಿರುತ್ತಿದ್ದವು. ನಂತರದ ಹಲವು ಶತಮಾನಗಳಲ್ಲಿ ಪೌರ್ವಾತ್ಯ ಪ್ರಭಾವ ಅಲ್ಲಿನ ಭಾವಚಿತ್ರ ಕಲ್ಪನೆಯಲ್ಲಿ ಉಂಟಾಯಿತು. ಅಸಾಮಾನ್ಯ ವ್ಯಕ್ತಿಗಳು ಮಾತ್ರ ಭಾವಚಿತ್ರ, ಶಿಲ್ಪಗಳಲ್ಲಿ ಕಾಣಿಸಿಕೊಂಡರು. ಅರಿಸ್ಟಾಟಲ್‌ನ ಭಾವಚಿತ್ರ ಹೊಸ ಯುಗವನ್ನೇ ಹುಟ್ಟು

ಹಾಕಿತು. ಭಾವಚಿತ್ರಗ್ರಹಿಕೆಗೆ ಅದು ತೀವ್ರತೆಯನ್ನು, ಆಪ್ತತೆಯನ್ನು ನೀಡಿತು. ಅರಿಸ್ಟಾಟಲ್‌ನ ಅಸಾಧಾರಣ ಶಕ್ತಿ, ವಿವೇಚನೆಗಳ ಸಾಮರ್ಥ್ಯದ ಮನಸ್ಸಿನ, ಸಂವೇದನಾ ಶೀಲ ವ್ಯಕ್ತಿತ್ವವನ್ನು ನೋಡುಗರಿಗೆ ಕೂಡಲೇ ಅನುಭವಕ್ಕೆ ಬರುವಂತಹ, ಮೂಲದ ರೂಪಕ್ಕೆ ಹೋಲಿಕೆಯಾಗುವ ಭಾವಚಿತ್ರ ಕಲ್ಪನೆ ಅದು. ಅಲೆಕ್ಸಾಂಡರ್‌ನ ಭಾವ ಶಿಲ್ಪಗಳೂ ಅಷ್ಟೆ.



*ಚಿತ್ರ-20 : ಸ್ವ-ಭಾವಚಿತ್ರ, ವಿನ್ಸೆಂಟ್ ವ್ಯಾನ್‌ಗಾಗ್, ಮಾಧ್ಯಮ : ತೈಲವರ್ಣ, 1887.*

ಮೊದಲ ಕ್ರಿಶ್ಚಿಯನ್ ಚಕ್ರವರ್ತಿ ಕಾನ್‌ಸ್ಟಾಂಟಿನ್ ಭಾವಚಿತ್ರದನಂತರ ಈ ಕಲಾಪ್ರಕಾರ ಸ್ವತಂತ್ರ ಅಸ್ತಿತ್ವ ಹೊಂದಿತು. ವಿಶ್ವದ ಇತರ ಭಾಗಗಳ ಕಲೆಯಿಂದ ಆಸ್ಥಾನಗಳ ಆಶ್ರಯದ ಈ ಕಲಾಪ್ರಕಾರ ಪ್ರತ್ಯೇಕಗೊಂಡಿತು. ಇದೇ ಸಂದರ್ಭದಲ್ಲಿ ಖಾಸಗಿ ಪ್ರಜೆಗಳ ಭಾವ ಚಿತ್ರಗಳ ಮೇಲೆ ಕ್ರಿಶ್ಚಿಯನ್ ಧರ್ಮವೂ ಪ್ರಭಾವ ಬೀರಿತು. ಆದರೂ ಭಾವ ಚಿತ್ರಕಲೆಯ ಬಗ್ಗೆ ಚರ್ಚ್‌ಗಳು ಗೊಂದಲದಲ್ಲಿಯೇ ಇದ್ದವು. ನಾಣ್ಯಗಳ ಮೇಲೆ ಹಲವು ಚಕ್ರವರ್ತಿಗಳ ಭಾವ ಚಿತ್ರ ರೂಪಗಳೂ ಕಾಣಿಸಿಕೊಂಡವು!

ಮೊಸಾಯಿಕ್ ಭಾವಚಿತ್ರಗಳು ಚರ್ಚ್‌ಗಳಲ್ಲಿ ಹೆಚ್ಚಾಗಿ ಕಾಣಿಸಿಕೊಂಡವು. ಸನ್ಯಾಸಿಗಳ ಪ್ರವಾದಿಗಳ ಭಾವ ಚಿತ್ರಗಳು ಆಸಕ್ತಿಯಿಂದ ಮೂಡಿಬಂದವು. ರೋಮನ್, ಎಸ್.ಮಾರಿಯಾ ಆಂಟಿಖ್ವಾದ ಭಿತ್ತಿಚಿತ್ರಗಳಲ್ಲಿ ಪೋಪ್ ಝುಚಾರಿಯಾರ ಭಾವಚಿತ್ರವನ್ನು ಚರ್ಚ್ ಹೊರಗಿನ ಬೇರೊಬ್ಬ ಕಲಾವಿದನಿಂದ ವಿಶೇಷವಾಗಿ ಚಿತ್ರಿಸಲಾಯಿತು.

ಯೂರೋಪಿಯನ್ ಪಶ್ಚಿಮದ ರಾಷ್ಟ್ರಗಳಲ್ಲಿ ಮಧ್ಯಯುಗದ ಕಲೆಯ ಮುಖ್ಯ ಉದ್ದೇಶವೇ ಕ್ರಿಸ್ತನನ್ನು ಚಿತ್ರಿಸುವುದು. ಅಲೆಕ್ಸಾಂಡರ್‌ನ ಸಂದರ್ಭದಲ್ಲಿ ಸೀಸರ್‌ನ ಕಾಲದಲ್ಲಿ ರಾಜಮುದ್ರೆ ಮತ್ತು ನಾಣ್ಯಗಳ ಮೇಲೆ ಮುಖಗಳ ಭಾವಚಿತ್ರಗಳು ಕಾಣಿಸಿಕೊಂಡವು. ಹಾಗೆಯೇ ಆ ದಿನಗಳಲ್ಲಿ ಚರ್ಚ್‌ನ ಸಂಸ್ಥಾಪಕರ, ಪೋಷಕರ ಭಾವಚಿತ್ರಗಳೂ ದೊಡ್ಡರೀತಿಯಲ್ಲಿ ಚಿತ್ರಿಸಲ್ಪಟ್ಟವು. ಚಿತ್ರಾಲಂಕೃತ ಹಸ್ತಪ್ರತಿಗಳಲ್ಲೂ ಟ್ಯಾಪೆಸ್ಟ್ರೀ ಗಾಜು-ಚಿತ್ರ ಹಾಗೂ ಲೋಹದ ಮಾಧ್ಯಮಗಳಲ್ಲೂ ಭಾವ ಚಿತ್ರ, ಭಾವ ಶಿಲ್ಪಗಳು ಮೂಡಿ ಬಂದವು. ಮುಖ ಸಾಮುದ್ರಿಕೆಯ (Physiognomy) ಫಲವಾಗಿ ಶಿಲ್ಪ, ಮುಖವಾಡ, ಇತ್ಯಾದಿಗಳು ವಿಶ್ವಾತ್ಮಕವಾಗಿ ಮೂಡಿಬಂದವು. ಆದರೆ ನಿರ್ದಿಷ್ಟವ್ಯಕ್ತಿಗತ ಲಕ್ಷಣಗಳ ಭಾವಚಿತ್ರಗಳು ನಿಷ್ಕೃಷ್ಟ ಗುಣ ಕಾಣಲಿಲ್ಲ. ಈ ಸಂದರ್ಭದಲ್ಲಿ ಭಾವ ಚಿತ್ರಕಲೆಯ ಸೃಷ್ಟಿ ಪ್ರಕ್ರಿಯೆಯ ಕಲ್ಪನೆಗೆ ಕಲಾವಿದ ಜಿಯತ್ತೋ ಹೊಸ ಸಾಧ್ಯತೆಗಳನ್ನು ತೋರಿದನು. ಆ ಹಿಂದೆ ಬದುಕಿನ ನೈಜತೆಗೆ, ಜೀವಂತಿಕೆಗೆ ಹತ್ತಿರವಾದ ಭಾವಚಿತ್ರಣ ಅಪ ರೂಪವಾಗಿದ್ದದ್ದು ಜಿಯೋತ್ತೋನ ಕಲೆಯಲ್ಲಿ ಮೂಡಿ ಬಂದ ಎಲ್ಲ ಮಾನವ ರೂಪಗಳಲ್ಲೂ ಕಾಣಿಸಿಕೊಂಡಿತು! ಭಿತ್ತಿಚಿತ್ರಗಳೇ ಅಲ್ಲದೆ ಗಾಜು ಚಿತ್ರ ಹಾಗೂ ಪುಸ್ತಕರೂಪದ ಚಿತ್ರಗಳಲ್ಲೂ ಈ ಬೆಳವಣಿಗೆ ಆಯಿತು. ಇವೆಲ್ಲವುಗಳನ್ನೂ ಮೀರಿ ಕಲಾವಿದರು ಸ್ವತಂತ್ರ ಭಾವಚಿತ್ರಗಳನ್ನು ವಾಸ್ತವಕ್ಕೆ ಹತ್ತಿರವಾಗಿ ಚಿತ್ರಿಸಿದರು.



*ಚಿತ್ರ-21 : ಸ್ವ-ಭಾವಚಿತ್ರ, ಪಿಕಾಸೋ, ಮಾಧ್ಯಮ : ಮಿಶ್ರ, 1975.*

ಪುನರುಜ್ಜೀವನ ಕಾಲದ ಮಾನವ ಪ್ರಧಾನ ದೃಷ್ಟಿ ಉಂಟಾದ ಸಂದರ್ಭ ಸಹಜ ವಾಗಿಯೇ ಮನುಷ್ಯನ ಭಾವಗಳಿಗೆ ಅಪೂರ್ವ ಮೆರುಗು. 'ಮಾಡೆಲ್'ನ ರೂಪದ ಆಳಕ್ಕೆ



ಚಿತ್ರ-22 : ಬಸ್ತಾರ್‌ನ ಒಂದು ಶಿಲಾಚಿತ್ರ, 1991

ಹೊಕ್ಕು ಹೆಚ್ಚಿನ ತೀವ್ರತೆಯಿಂದ ನೋಡುವ ಚಿತ್ರಿಸುವ ಪ್ರಯತ್ನಗಳು ಗಟ್ಟಿಯಾಗಿ ನಡೆದವು ಮುಖವನ್ನು ಹೆಚ್ಚಿನ ಪ್ರೌಢತೆಯಿಂದ ಅಧ್ಯಯನ ಮಾಡಿ, ಚಿತ್ರಿಸುವ ಪರಿಪಾಠ ಬೆಳೆಯಿತು. ಜಾನ್‌ವ್ಯಾನ್ ಐಕ್‌ನ 'portrait of a young man' (oct 10, 1432) ಹಾದಿಯ ಅನುಸರಣೆ; ಅರಿಸ್ಟಾಟಲ್‌ನ ತತ್ವದ ಸ್ಫೂರ್ತಿ.

15ನೆಯ ಶತಮಾನದ ದ್ವಿತೀಯಾರ್ಧದಲ್ಲಿ ಭಾವಚಿತ್ರಕಲಾಪ್ರಕಾರ ಚಿರಸ್ಥಾಯಿಯಾಗುವ ನಿಟ್ಟಿನ, ಸ್ಮಾರಕದಂತಹ ದೃಷ್ಟಿಯಿಂದ ನೋಡಲ್ಪಟ್ಟಿತು. ಆದರ್ಶದ ಅಂಶವನ್ನು ಪ್ರತಿನಿಧಿಸಲು ರಿಯಲಿಸಂ ಅನ್ನು ದೂರಸರಿಸಲಾಯಿತು ಮೈಖೇಲ್ ಏಂಜಲೋ ಬ್ರೂಟಸ್ ಮತ್ತಿತರ ಭಾವಶಿಲ್ಪಗಳನ್ನು ತನ್ನ ಕಲ್ಪನೆಯಂತೆ ರೂಪಿಸಿದನು. ದೇಹದ ಹೊರ ರೂಪದ ವಾಸ್ತವತೆಗಿಂತಲೂ ವ್ಯಕ್ತಿತ್ವ ಮತ್ತು ಭಾವನೆಗಳಿಗೆ ಕಲಾವಿದ ಪ್ರಾಮಾಣಿಕನಾಗಿರಬೇಕೆಂದು ಏಂಜಲೋ ತೋರಿದನು. ಅವನ ಟೀಕಾಕಾರರು ಅವನ

ಕೆಲವು ಶಿಲ್ಪಗಳನ್ನು ಸರಿಯಾದ ಭಾವಚಿತ್ರಗಳೇ ಅಲ್ಲ' ಎಂದಾಗ 'in a thousand years no one will know the difference' ಎಂದು ಉತ್ತರಿಸಿರ ಬೇಕು. ವ್ಯಾಟಿಕನ್ ಸಿಸ್ಟಿನಿ ಛಾಪಲ್‌ನಲ್ಲಿನ ಪ್ರವಾದಿ ಜೆರೆಮೈನ ಭಾವಚಿತ್ರ ಮೈಖೇಲ್ ಏಂಜ ಲೋನ ಸ್ವಭಾವ ಚಿತ್ರವೇ ಆಗಿದೆ ಎಂದು ಹೇಳಲಾಗಿರುವುದು ಗಮನಾರ್ಹ! ಆನಂತರ ವೈರುಧ್ಯಮಯವಾಗಿ 'ಮಾಡೆಲ್'ನ ಚರ್ಮವೂ ಅನುಭವವಾಗುವಂತಹ ಸಹಜತೆಯನ್ನು ವೆನಿಸ್ ಕಲಾವಿದರು ಟೈಟಾನ್ (Titan) ಮುಂದಾಳತ್ವದಲ್ಲಿ ಬಹುಪಾಲು ಕಲಾವಿದರೂ ಒಪ್ಪಿ ಕೊಳ್ಳಬಹುದಾದ ಸಮರೂಪದ ಭಾವಚಿತ್ರ ಶೈಲಿಯನ್ನು ಚಲಾವಣೆಗೆ ತಂದರು. ಟೈಟಾನ್ ತನ್ನ ಸಂದರ್ಭದ ಬಹುಮುಖ್ಯ ರಾಜಕೀಯ ವ್ಯಕ್ತಿಗಳೇ ಅಲ್ಲದೆ ಸಾಹಿತ್ಯ ಲೋಕದ ಗಣ್ಯರನ್ನು ಚಿತ್ರಿಸಿದನು. ಉಳಿದಂತೆ ಇವನ ಬಹುತೇಕ ಭಾವಚಿತ್ರಗಳು ಇತರ ಕಲಾವಿದರ ಸ್ಕೆಚ್ ಹಾಗೂ ಮೆಡಲ್‌ಗಳ ಮೇಲಿದ್ದ ಭಾವಚಿತ್ರಗಳನ್ನು ಆದರಿಸಿದ್ದವು. ತನ್ನ 'Discorso intorno alle immagini sacre a profane' (1582) ಪುಸ್ತಕದಲ್ಲಿ Gabriele paleotti ಬರೆಯುತ್ತಾನೆ. ಕೆಲವು ಕಲಾವಿದರು"...from the mere verbal report on the face, coloring, demeanor, feautures and other characteristics of a person whom they have never seen........ apprehend the whole so wonderfully in their art that they would seem to have had it before them a long time." ಆದರೆ ಈ ಭಾವಚಿತ್ರಗಳು ನೊಡುಗನೊಂದಿಗೆ ನೇರನೋಟ



*ಚಿತ್ರ-23 : ಕೆಂಪು ಉಡುಗೆಯ ಮಹಿಳೆ, ಪಾಲ್‌ಗಾಗಿನ್, ಮಾಧ್ಯಮ : ತೈಲವರ್ಣ, 1891 (The Granger collection, New York)*



*ಚಿತ್ರ-24 : ಸ್ವ-ಭಾವಚಿತ್ರ, ಪಾಲ್‌ಗಾಗಿನ್, ಮಾಧ್ಯಮ : ತೈಲವರ್ಣ, 1893.*



*ಚಿತ್ರ-25 : ರಾಜಾರವಿ ವರ್ಮನ ಸಂಗೀತಗಾತಿಯರು, ಗುಂಪು ಭಾವಚಿತ್ರ, ಮಾಧ್ಯಮ ತೈಲವರ್ಣ.(ಸಂಗ್ರಹ : ಶ್ರೀ ಜಯ ಚಾಮರಾಜೇಂದ್ರ ಕಲಾ ಗ್ಯಾಲರಿ, ಮೈಸೂರು)*

ಬೀರುವ ಸೃಷ್ಟಿಗಳು. ಇದೊಂದು ಅಸಾಮಾನ್ಯ ಸಾಧನೆ.

16ನೆಯ ಶತಮಾನದ ಹೊತ್ತಿಗೆ ಭಾವಚಿತ್ರಗಳು ಜೀವನ ಚರಿತೆಗಳ ಕಾರಣಕ್ಕಾಗಿ ಸಂರಕ್ಷಿಸಿಡುವಂತಾದವು. ಡಾವಿಂಚಿಯ ಮೋನಾಲಿಸಾ ಭಾವಚಿತ್ರದ ಹಿನ್ನೆಲೆಯಲ್ಲಿ ಭೂದೃಶ್ಯವೂ ಕಾಣಿಸಿಕೊಂಡು ಕುತೂಹಲ ಮೂಡಿಸಿತು.

ಜರ್ಮನಿಯ ಪುನರುಜ್ಜೀವನ ಭಾವಚಿತ್ರಗಳು ಡ್ಯೂರರ್ ಮತ್ತು ಅವನ ಶೈಲಿಗೆ ಹತ್ತಿರವಾದ ಹಲವರಿಗೆ ಋಣಿಯಾಗಿವೆ. 1498ರಲ್ಲಿ ಡ್ಯೂರರ್ ತನ್ನ ಸ್ವಭಾವಚಿತ್ರವನ್ನು ಒಬ್ಬ ಚಿಂತಕ, ವಿದ್ವಾಂಸನಂತೆ ಚಿತ್ರಿಸಿದನು. ಅಂದಿನ (16ನೆಯ ಶತಮಾನ) ಸಂದರ್ಭದಲ್ಲಿ ನ್ಯಾಯಾಲಯ ನಿಯಮಗಳಲ್ಲಿ ಭಾವಚಿತ್ರವೊಂದು ಯಾವುದೇ ಸಂದರ್ಭಕ್ಕೆ ನ್ಯಾಯಕ್ಕಾಗಿ

ಹಾಜರು ಪಡಿಸಿದರೆ 'Completely realistic' ಆಗಿದ್ದರೆ ಮಾತ್ರ ಅದನ್ನು ನ್ಯಾಯಾಲಯ ಪರಿಗಣಿಸುತ್ತಿತ್ತು. ಹೀಗಾಗಿಯೇ ಅಂದಿನ ಕಲಾವಿದರ ಭಾವಚಿತ್ರಗಳಲ್ಲಿ ಅತ್ಯಂತ ತ್ರೀವ್ರ ರೂಪದಲ್ಲಿ ಮುಖಗಳನ್ನು ಅಧ್ಯಯನ ಮಾಡುವ ಪರಿಪಾಠವೂ ಬೆಳೆಯಿತು. ತಮ್ಮ ಸ್ಟುಡಿಯೋಗಳಲ್ಲಿ ಕುಳಿತ 'ರೂಪದರ್ಶಿ'ಗಳ ಆಯಾಸ, ಬೇಸರ, ಕೌತುಕ ಇವೆಲ್ಲವುಗಳನ್ನು ಉದ್ದೇಶ ಪೂರ್ವಕವಾಗಿ ಭಾವಚಿತ್ರದಲ್ಲಿ ಪುನರ್‌ಸ್ಥಾಪಿಸಿದ್ದೂ ಉಂಟು; ಯಾವುದೇ

*ಚಿತ್ರ-26 : ಬೆಳದಿಂಗಳಿನಲ್ಲಿ ಬಾಲೆ, ರಾಜಾರವಿವರ್ಮಾ,*
*ಮಾಧ್ಯಮ : ತೈಲವರ್ಣ.*
*(ಸಂಗ್ರಹ : ಶ್ರೀ ಜಯ ಚಾಮರಾಜೇಂದ್ರ ಕಲಾ ಗ್ಯಾಲರಿ, ಮೈಸೂರು)*





*ಚಿತ್ರ-27 : ಭಾವಚಿತ್ರ, ವೈ. ಸುಬ್ರಮಣ್ಯರಾಜು, ಮಾಧ್ಯಮ : ತೈಲವರ್ಣ, 1933.*

ಮುಚ್ಚುಮರೆ ಇರುತ್ತಿರಲ್ಲಿಲ್ಲ! ವಿರುದ್ಧವೆಂಬಂತೆ ಪೀಟರ್‌ಪಾಲ್ ರುಬೆನ್ಸ್, ಫ್ರಾನ್ಸ್ ಹಾಲ್ಸ್ ಹೆಚ್ಚಾಗಿ ಎಂಟನ್ ವಾನ್ ಡೈಕ್ ಮುಖ ಸಾಮುದ್ರಿಕೆಯ (Physio gnomical) ಅಧ್ಯಯನ ಮೂಲದ ಗುಣಲಕ್ಷಣಗಳ ಚಿತ್ರಣವನ್ನು ಹೆಚ್ಚು ಹೆಚ್ಚು ಉತ್ತಮವಾಗಿ ತಂದುಕೊಳ್ಳುತ್ತಾಹೋದರು.

ತನ್ನ ಗಾಢವಾದ ಭಾವನೆಗಳ ಗುಂಪಿನ ಭಾವಚಿತ್ರಗಳಲ್ಲಿ ಮನಶಾಸ್ತ್ರೀಯ ಏಕತೆಯನ್ನು ತಂದುಕೊಳ್ಳುತ್ತಿದ್ದ ರೆಂಬ್ರಾಂಟ್ ಈ ಏಕತೆಯನ್ನು ಸಾಧಿಸಲು ಒಂದೇ ಬಣ್ಣದ ಛಾಯಾಂತರಗಳನ್ನು ದುಡಿಸಿಕೊಳ್ಳುತ್ತಿದ್ದನು.

18ನೆಯ ಶತಮಾನದಲ್ಲಿ Neo-classicism ಆಗಮನಕ್ಕೆ ಮೊದಲು ಭಾವಚಿತ್ರಕಲೆಯಲ್ಲಿ ಮೂರು ಮುಖ್ಯ ಪ್ರವೃತ್ತಿಗಳಿದ್ದವು.

1. ಬರೋಕ್ ಸಂಪ್ರದಾಯದ ಭಾವಚಿತ್ರಗಳು

2. ರೂಪಕಾತ್ಮಕ ಆರ್ಕೇಡಿಯನ್ ಭಾವಚಿತ್ರಗಳು

3. ನೈಜಶೈಲಿಯ ಭಾವಚಿತ್ರಗಳು.

ಈ ಮೂರೂ ಪರಸ್ಪರ ಪ್ರಭಾವ ಬೀರುತ್ತಲೇ ಬೆಳೆದು ತಮ್ಮದೇ ಆದ ಸಾಮಾಜಿಕ ವರ್ಗಗಳಲ್ಲಿ ನೆಲೆಸಿದವು; ನಿರ್ದಿಷ್ಟವಾದ ಕಲೆಯ ಕೇಂದ್ರಗಳಲ್ಲಿ ಅಲ್ಲ.



*ಚಿತ್ರ-28 : ಹುಲ್ಲಿನ ಟೋಪಿಯ ವ್ಯಕ್ತಿ, - ಪಿಕಾಸೋ, ಮಾಧ್ಯಮ : ತೈಲವರ್ಣ, ಜುಲೈ 26, 1971.*

18ನೆಯ ಶತಮಾನದಲ್ಲಿ ಭಾವಚಿತ್ರಗಳ ಸೃಷ್ಟಿಯು ವೇಗವನ್ನು ಕಂಡಿತು. ಹೆಣ್ಣನ್ನು ಅರೆನಗ್ನವಾಗಿ ಅಥವಾ ಕಡಿಮೆ ಉಡಿಗೆಗಳಲ್ಲಿ ಚಿತ್ರಿಸಲಾಗುತ್ತಿತ್ತು. ಕುಟುಂಬದ ಭಾವಚಿತ್ರಗಳಿಗೆ ಅಷ್ಟೇನೂ ಬೇಡಿಕೆಯಿರುತ್ತಿರಲಿಲ್ಲ. 18ನೆಯ ಶತಮಾನದ ವಿಶಿಷ್ಟ ಸ್ತ್ರೀಸಂವೇದನಾ ಶೀಲತೆ ಮಹಿಳಾ ಕಲಾವಿದೆಯರೂ ಹೆಸರು ಮಾಡುವಂತೆ ಮಾಡಿತು. ರೋಸಲ್ಬಾ ಕಾರಿಯೆರಾ, ಏಂಜಲಿಕಾ ಕಾಫ್‌ಮನ್ ಅವರಲ್ಲಿಬ್ಬರು. ರೂಪದರ್ಶಿಗಳು ಮತ್ತು ಕಲಾವಿದೆಯರು ಪರಸ್ಪರ ಉತ್ತಮ ಆಯ್ಕೆಗಳಂತಿದ್ದರು. ಸರ್‌ಜೋಸ್ವಾ ರೇನಾಲ್ಡ್ ಮತ್ತು ಥಾಮಸ್ ಗೈನ್ಸ್‌ಬರ್ಹ್ವೋರವರುಗಳು ತಮ್ಮ ಭಾವಚಿತ್ರಗಳಲ್ಲಿ ರೂಪದರ್ಶಿಗಳ ಹಾವ-ಭಾವ, ಆಭರಣ ಹಾಗೂ ಉಡುಗೆಗಳ ಮೂಲಕ ನಾಟಕೀಯಗೊಳಿಸುತ್ತಿದ್ದರು. ಇಂಗ್ಲೆಂಡಿನ ವಿಲಿಯಂ ಹೊಗಾರ್ಥ್ ಗುಂಪಿನ ಭಾವಚಿತ್ರಗಳಿಗೆ ಜನ ಪ್ರಿಯತೆಯನ್ನು ತಂದುಕೊಟ್ಟನು. ಅವು ದಂತ ಕಥೆಯ ಸ್ಪರ್ಶ ಹೊಂದಿರುತ್ತಿದ್ದವು. ಕಲಾವಿದರು, ಕವಿಗಳು ಮೊದಲಾದವರು ತಾವು ಚಿತ್ರಿಸುತ್ತ,



*ಚಿತ್ರ-30 : ಭಾವಚಿತ್ರ, ಡಾ|| ಸ್ವೆತೋಸ್ಲಾವ್ ರೋರಿಕ್,*
*ಮಾಧ್ಯಮ : ತೈಲವರ್ಣ,*
*(ಸಂಗ್ರಹ : ಕರ್ನಾಟಕ ಚಿತ್ರ ಕಲಾ ಪರಿಷತ್ತು)*

ಬರೆಯುತ್ತ ಇರುವಂತೆ ಹೊಗಾರ್ಥ್ ಭಾವಚಿತ್ರ ರಚಿಸುವುದನ್ನು ಇಷ್ಟ ಪಡುತ್ತಿದ್ದರು. ಫ್ರೆಂಚ್ ಕ್ರಾಂತಿ ಹಾಗೂ 19ನೆಯ ಶತಮಾನದ ಉದ್ದಕ್ಕೂ ಭಾವಚಿತ್ರ ಸೃಷ್ಟಿ ಪ್ರಕ್ರಿಯೆಯಲ್ಲಿ ಹಲವು ಪ್ರವೃತ್ತಿಗಳು ಕಾಣಿಸಿಕೊಂಡವು. ನೆಪೋಲಿಯನ್ ತನ್ನ ಆಸ್ಥಾನದ ಕಲಾವಿದರಿಗೆ (ಬಾರನ್‌ಗ್ರೋಸ್, ಡೇವಿಡ್, ಪಿಯರೆನಾರ್ಸಿಸ್ಸೇ ಗೇರಿನ್) ಹೇಳಿದ 'What do you want a model for? do you think that the great men of antiquity sat for their portraits? who cares whether the busts of Alexander the great look like him so long as the image we have of him is in keeping with the greatness of his genius? that is how great men should be portrayed." ಈ ಮಾತುಗಳು ಆ ಸಂದರ್ಭದ 'Official taste' ಅನ್ನು ಬಿಂಬಿಸುತ್ತವೆ. ಡೆಲಾಕ್ರಾಯಿಕ್ಸ್ Realists ಹಾಗೂ neo-classists ಇಬ್ಬರ ಜತೆಗೂ ಸಮನಾದ ಶಕ್ತಿಯಿಂದ ವಾದ ಮಾಡುತ್ತಲೇ ತನ್ನ Journal



*ಚಿತ್ರ-31 : ಒಂದು ಭಾವಚಿತ್ರ, ಜಿ.ಎಸ್. ದಂಡಾವತಿ ಮಠ,*
*ಮಾಧ್ಯಮ - ತೈಲವರ್ಣ.*

ನಲ್ಲಿ (trans. w.pach.Newyork, 1937, p.234) "Cold exactitude is not art, ingenious artifice, when it pleases or when it expresses,is art itself.... it would be interesting to write a treatise on all the falsehoods which can add up to the truth"[4]. ಎಂದು ದಾಖಲಿಸಿದ್ದಾನೆ. ವಾಸ್ತವ ಪ್ರವೃತ್ತಿ ಗೋಯನಿಂದಾರಂಭಿಸಿ ಹೆಚ್ಚು ಹೆಚ್ಚು ಹರಡಿತು. ಅದು 10ನೇ ಶತಮಾನದ ಭಾವಚಿತ್ರಕಲೆ ಹೆಚ್ಚು ಆಧುನಿಕ ಹಾಗೂ ಗಮನಾರ್ಹವಾಗಲು ಕಾರಣವಾಗುವಂತೆ ಮಾಡಿತು.

ಮುಖ ಸಾಮುದ್ರಿಕಾ (Physiognomical) ಭಾವಚಿತ್ರ ಪ್ರಕಾರ ವಿಶಾಲ ವ್ಯಾಪ್ತಿಯ ಕೃತಿಗಳನ್ನು ಆವರಿಸಿದೆ. ಗೋಯಾನ ಜೀವಂತ ರೂಪದರ್ಶಿಗಳ ಚಿತ್ರಗಳೇ ಅಲ್ಲದೆ ಡಾಮಿರ್‌ನ ಕಹಿರಾಜಕಾರಣದ ಕ್ಯಾರಿಕೇಚರ್‌ಗಳನ್ನೂ ಒಳಗೊಂಡಂತೆ ರಿಯಲಿಸಂ ವರೆಗು ಈ ವ್ಯಾಪ್ತಿ ಆವರಿಸಲ್ಪಟ್ಟಿದೆ.



*ಚಿತ್ರ-32 : ಮಾಧೋಸಿಂಗ್ - II, ಉಮಾಶಂಕರ್ ಶರ್ಮಾ, ಮಾಧ್ಯಮ : ಖನಿಜ ಬಣ್ಣಗಳು, 1996.*

ಇನ್‌ಗ್ರೆಸ್ ತಾನೇ ಹೇಳಿಕೊಂಡಿರುವಂತೆ ಅವನು ನಿಯೋ-ಕ್ಲಾಸಿಸಂ ಅನ್ನೂ ಗ್ರಹಿಸಿಲ್ಲ ರೋಮ್ಯಾಂಟಿಕ್ ಆದರ್ಶೀಕರಣವನ್ನೂ ಅನುಸರಿಸಲಿಲ್ಲ ಎಂದಾದರೂ ಅವನನ್ನು 19ನೆಯ ಶತಮಾನದ ಶ್ರೇಷ್ಠ ಭಾವಚಿತ್ರಕಾರನೆಂದು ಕಲಾ ಇತಿಹಾಸಕಾರರು ಕರೆದಿದ್ದಾರೆ.

ರಿಯಲಿಸಂನ ಆಕರ್ಷಣೆ ಛಾಯಾಚಿತ್ರ ಮಾಧ್ಯಮವನ್ನು ಅಪ್ಪಿಕೊಳ್ಳುವಂತೆಯೂ ಮಾಡಿತು. ಡೆಲಾಕ್ರಾಯಿಕ್ಸ್ ಛಾಯಾ ಚಿತ್ರಗಳನ್ನು ತನ್ನ ಕಲಾ ಕೃತಿಗಳ ಸೃಷ್ಟಿಗೆ ಆಕರವಾಗಿ ಬಳಸಿದನು. ವೈಜ್ಞಾನಿಕ ಅಧ್ಯಯನಗಳು 19ನೆಯ ಶತಮಾನದ ಅತ್ಯುತ್ತಮವಾಗಿ

ಭಾವಚಿತ್ರಗಳನ್ನು ಚಿತ್ರಿಸಿದ ಕಲಾವಿದರನ್ನು ಪ್ರಭಾವಿಸಿವೆ. ಗೋಯಾ, ರೆಂಬ್ರಾಂಟ್, ಮಾನೆ, ಮೋನೆ, ಡೇಗಾ, ರಿನಾಯಿರ್‌ರವರುಗಳೂ ಇಲ್ಲಿ ನೆನಪಾಗುತ್ತಾರೆ. ಇವರುಗಳ ವೈಯಕ್ತಿಕ ಪ್ರವೃತ್ತಿಗಳ ಕಾರಣವಾಗಿಯೂ ರೂಪದರ್ಶಿಗಳ ಭಾವಚಿತ್ರಣ ವಿಶೇಷವಾಗಿ, ವೈವಿಧ್ಯಮಯವಾಗಿ ಮೂಡಿ ಬರುವುದು ಸಾಧ್ಯವಾಯಿತು.

*ಚಿತ್ರ-33 : ಸ್ವ-ಭಾವಚಿತ್ರ, ಅಮೃತಾ ಶೇರ್‌ಗಿಲ್,*
*ಮಾಧ್ಯಮ : ತೈಲವರ್ಣ.*



ಛಾಯಾಚಿತ್ರ ಮಾಧ್ಯಮದ ವಿರುದ್ಧದ ಪ್ರತಿಕ್ರಿಯೆಯಂತೆ ಭಾವಚಿತ್ರ ಪ್ರಕಾರ ಹೊಸತನಗಳನ್ನು ಲೇಪಿಸಿಕೊಂಡಿದ್ದೂ ಉಂಟು. ಕಂಡ ಕಂಡವರನ್ನೆಲ್ಲಾ ಚಿತ್ರಿಸುವ ಅಭ್ಯಾಸ ಬೆಳೆಯಿತು. ಟಾಲೌಸೆ ಲಾವ್‌ಟ್ರೆಕ್, ಹೆಬ್ಬಾಗಿ ಡಾಮಿರ್ ನ ಕೃತಿಗಳಲ್ಲಿ ಸಮಾಜದ ಎಲ್ಲ ವರ್ಗಗಳ ಜನ ಕಾಣಿಸಿಕೊಂಡರು. ರೂಪಗಳನ್ನು 'ವಿಕೃತಿ' ಗೊಳಿಸುವ ಪ್ರವೃತ್ತಿಯೂ ಪ್ರಾರಂಭವಾಯಿತು. ಆಗಸ್ಟೇ



*ಚಿತ್ರ-35 : ಸ್ವ-ಭಾವಚಿತ್ರ, ಫ್ರಾನ್ಸಿಸ್ ಬೇಕನ್, 1972.*

ರೋಡಿನ್‌ನ ಶಿಲ್ಪಗಳ ಅಪೂರ್ಣವಾಗಿ ಉಳಿದುಕೊಳ್ಳುತ್ತ ವಿಶಿಷ್ಟ ಅನುಭವ ನೀಡತೊಡಗಿದವು. ಬಾಲ್‌ಝಾಕ್‌ನ್ ಭಾವ ಶಿಲ್ಪ ಈ ದೃಷ್ಟಿಯದೆ. ರೋಡಿನ್ ನಿಂದ ಮೂಡಿ ಬಂದ ಈ ಭಾವಶಿಲ್ಪ ರೂಪದರ್ಶಿಗೆ ಒಪ್ಪಿಗೆಯಾಗಲೇ ಇಲ್ಲ! ಮ್ಯಾನ್‌ರೇನ ಸ್ವಭಾವ ಚಿತ್ರಗಳೂ ಗಣನೀಯ. ವ್ಯಾನ್‌ಗೋನ ಭಾವಚಿತ್ರಗಳು, ಸ್ವಭಾವ ಚಿತ್ರಗಳು ಇದೇ ದೃಷ್ಟಿಯವು. "Instead of trying to render exactly what I have before my eyes I use

colour more orbitraily to express myself forcefully......." ಎಂಬ ಅವನ ಮಾತುಗಳು ಮೇಲಿನ ದೃಷ್ಟಿಯಿಂದ ಗಮನಾರ್ಹ. ವಿವರಿಸುವಂತಹ ಸಾದೃಶ್ಯತೆಯನ್ನು ಛಾಯಾಚಿತ್ರದ ನೈಜತೆ ತಂದುಕೊಡ ಬಲ್ಲದಾದರೂ ಅದು ಕಲಾ ಕೃತಿಯಾಗಲಾರದು. ಕ್ಯಾಮರಾ ನೋಡಲಾರದು ಅದು ನಮೂದು ಅಥವಾ ದಾಖಲು ಮಾಡುತ್ತದೆ ಅಷ್ಟೆ. ಅದರ ಕಣ್ಣು ಮನುಷ್ಯನ ಮನಸ್ಸಿನ ಕಣ್ಣು, ಕೈ, ಅಲ್ಲವಲ್ಲ. ಮುಂದಿನ ಬೆಳವಣಿಗೆಯಲ್ಲಿ ಫಾವಿಷ್ಟರು ಮತ್ತು ಜರ್ಮನ್ ಎಕ್ಸ್‌ಪ್ರೆಷನಿಸ್ಟರು ಚಿತ್ರಾತ್ಮಕ ರೂಪಕ್ಕೆ ಮನಃಶಾಸ್ತ್ರೀಯ ತೀವ್ರತೆಯನ್ನು ತಂದು ಕೊಟ್ಟರು. ಅದೇ ಸಂದರ್ಭದಲ್ಲಿ ಜರ್ಮನಿ ಯಲ್ಲಿ ಓಲಿಯೋಗ್ರಾಫ್ ಪ್ರಿಂಟ್ ಮಾಧ್ಯಮದ ಭಾವ ಚಿತ್ರಗಳೂ ಕಾಣಿಸಿಕೊಂಡವು! ಮ್ಯಾತಿಸ್, ಬಾದಿಲೇರ್ ರವರುಗಳ



*ಚಿತ್ರ-36 : ಭಾವಚಿತ್ರ, ಶಾಂತಲಿಂಗಪ್ಪ ಪಾಟೀಲ್, ಮಾಧ್ಯಮ : ಜಲವರ್ಣ, (ಸಂಗ್ರಹ : ದಿ ಐಡಿಯಲ್ ಫೈನ್ ಆರ್ಟ್ ಸೊಸೈಟಿ, ಗುಲ್ಬರ್ಗಾ)*

*ಚಿತ್ರ-39 : ಮಲಯಾಳಂ ಬರಹಗಾರ ಅಬ್ದುಲ್ ಬಷೀರ್, - ಯೂಸೂಫ್ ಅರಕ್ಕಲ್, ಮಾಧ್ಯಮ : ತೈಲವರ್ಣ, 1995.*



ದೃಷ್ಟಿಯಲ್ಲಿ ಭಾವ ಚಿತ್ರಣದ ನಿರ್ವಹಣೆಯಲ್ಲಿ ಅಸಾಮಾನ್ಯತೆ ಕಂಡಿತು.[5] ಈ ಅಸಾಮಾನ್ಯತೆ ರೂಪಕ್ಕೆ ಹೆಚ್ಚಿನ ಪ್ರಾಮುಖ್ಯತೆಯನ್ನು ನೀಡುವಲ್ಲಿ ಅಡ್ಡಿಯಾಯಿತು. ಕ್ಯೂಬಿಸಂ ಹೊತ್ತಿಗೆ ರೂಪವು ತುಂಡು ತುಂಡಾಯಿತಾದರೂ, ವಿಕೃತಿ ಸೌಂದರ್ಯವನ್ನು ಅರಗಿಸಿ ಕೊಂಡಿತು. ರೂಪವು ಸಂಪೂರ್ಣವಾಗಿ ಇಲ್ಲವಾಗಲಿಲ್ಲ. ಭಾವಚಿತ್ರ ಪ್ರಕಾರ ಮಾನವನ ವ್ಯಕ್ತಿತ್ವವನ್ನು ಪ್ರಭಾವ ಶಾಲಿಯಾಗಿ ವ್ಯಕ್ತಪಡಿಸುವ ಹೆಜ್ಜೆಗಳನ್ನಿಟ್ಟಿತು.[6] ನಂತರದಲ್ಲಿ ರೂಪದರ್ಶಿಯ ಹೊರಗಿನ ದೇಹಕ್ಕಿಂತಲೂ ಆವನ/ಅವಳ ದೈವೀಕ ಮುಖ ಕಲಾವಿದನಿಗೆ ಹೆಚ್ಚುಮುಖ್ಯವಾಗಿ ಕಂಡಿತು. ಪಾಲ್‌ಕ್ಲೆ ತನ್ನ ತರಗತಿಗಳಲ್ಲಿ ಮನುಷ್ಯನ ಮುಖವನ್ನು ಹೇಗೆ ಪುನರ್ ರೂಪಿಸಬೇಕು,



*ಚಿತ್ರ-41 : ಒಂದು ವ್ಯಕ್ತಿ ಚಿತ್ರ, - ಕೆ.ಟಿ. ಶಿವಪ್ರಸಾದ್ ಮಾಧ್ಯಮ : ತೈಲವರ್ಣ*

ಚಿತ್ರಿಸಬೇಕು ಎಂದು ಹೇಳಲಿಲ್ಲ, ಸಂಪೂರ್ಣ ನಿಷ್ಠೆಯಿಂದ ಮೂಡಿಬರುವ ಸ್ವಭಾವ ಚಿತ್ರ ಒಂದು ಶಂಖದಂತಿದ್ದು ಆದರೊಳಗೆ ಹಣ್ಣಿನ ಸಿಪ್ಪೆಯೊಳಗಿನ ಓಟೆಯ ಸುತ್ತಲೂ ಇರುವ ತಿರುಳಿನಂತೆ ನಾನಿರುತ್ತೇನೆ ಎಂದು ಘೋಷಿಸಿದನು. ಮತ್ತೊಂದು ಕಡೆ ಒಂದು ಶತಮಾನಕ್ಕೂ ಹೆಚ್ಚುಕಾಲ ಮಾನವನ ರೂಪವನ್ನು ದಾಖಲಿಸಿಡುವ ಕೆಲಸದಲ್ಲಿ ಛಾಯಾಚಿತ್ರ ತೊಡಗಿತ್ತು.



*ಚಿತ್ರ-42 : ಭಾವಚಿತ್ರ, - ವಿಜಯ ಸಿಂಧೂರ, ಮಾಧ್ಯಮ : ತೈಲವರ್ಣ, 1996.*



*ಚಿತ್ರ-44 :* ಮೈಸೂರಿನ ಕಾವಾದ ಭಾವಚಿತ್ರ ಪ್ರಾತ್ಯಕ್ಷಿಕೆಯೊಂದರಲ್ಲಿ ಆರ್.ಎಂ. ಹಡಪದ್, 1986.



ಚಿತ್ರ-45 : ಕುವೆಂಪು ಭಾವಚಿತ್ರ-
ವಿಷ್ಣುದಾಸ್ ರಾಮದಾಸ್,
ಮೈಸೂರು.



ಚಿತ್ರ-53 : ಭಾವಚಿತ್ರ, -
ರಮೇಶ್ ತೆರದಾಳ್,
ಮಾಧ್ಯಮ : ತೈಲವರ್ಣ, 1994.



*ಚಿತ್ರ-46 : ಇಂದಿರಾಗಾಂಧಿ ಭಾವಚಿತ್ರ, ಮೈಸೂರಿನ ಒಬ್ಬ ಕಲಾವಿದ ಮಾಧ್ಯಮ : ತೈಲವರ್ಣ.*

ಪ್ರಾರಂಭದಲ್ಲಿ ಅರಸು ಮನೆತನಗಳಿಗೆ ಇದ್ದ ಭಾಗ್ಯ ನಂತರದಲ್ಲಿ ಸಾಮಾನ್ಯರಿಗೂ ಒದಗಿ ಅವರ ದಿನ ನಿತ್ಯದ ಭಾವ-ಬಣ್ಣ-ಬೆಡಗುಗಳು, ಅವರ ನಡುವಿನ ಪ್ರೀತಿ-ಆದರಗಳು ವಿಶಿಷ್ಟವಾಗಿ ದಾಖಲಿಸಲ್ಪಟ್ಟವು. ಫೋಟೋರಿಯಲಿಸಂ ನಲ್ಲಂತೂ ಭಾವ ಚಿತ್ರಕಲೆಯ ವೈಭವ ಹಲವರಿಗೆ ಎದ್ದು ಕಂಡಿತು. ಪ್ರಾರಂಭದ ಇಸ್ಲಾಮಿನ ಪರ್ಷಿಯನ್ ಭಾವಚಿತ್ರಗಳು ವ್ಯಕ್ತಿಗಳ ಕ್ಯಾಲಿಗ್ರಾಫಿ ಕಲೆಯ ಮೂಲದವು. ಈ ಮುಖಗಳು ಜೀವಂತಿಕೆಯಿಂದ ವಂಚಿತ. ಮನುಷ್ಯನ ಮುಖಗಳವು ಎಂದು ಹೇಳುವುದಕ್ಕಿಂತ ಮುಖವಾಡಗಳು ಎಂದು ಹೇಳಬಹುದು.

ಭಾರತದ ಭಾವಚಿತ್ರಕಲಾ ಪರಂಪರೆಗೆ ವಿಶಿಷ್ಯ ಸಂಪ್ರದಾಯವಿದೆ. ಇತಿಹಾಸ ಗುಹಾ ಚಿತ್ರಗಳಲ್ಲಿ ಮನುಷ್ಯನ ಭಾವ ಚಿತ್ರಣಗಳು ಕೌತುಕಮಯ ಪ್ರಾರಂಭವನ್ನು ನಮ್ಮಲ್ಲಿ




*ಚಿತ್ರ-48 : "ಬೆಂಗಳೂರಿನ ಖೋಜ್" - 2004 ರ ಕಲಾ ಶಿಬಿರದಲ್ಲಿ ಮೂಡಿ ಬಂದ ಲಾರಾ ಮಾರ್ಟಿನ್‌ರವರ ಸ್ವ-ಭಾವ ಅಭಿವ್ಯಕ್ತಿ. ಮಾಧ್ಯಮ : ಡಿಜಿಟಲ್ ಪ್ರಿಂಟ್.*

ಕಂಡಿದ್ದಿದೆ. ಹಾಗೆಯೇ ಪ್ರಾರಂಭದಲ್ಲಿ ಧಾರ್ಮಿಕ, ರಾಜಕೀಯ ನಾಯಕರ ಅಥವಾ ರಾಜ ಮಹಾರಾಜರುಗಳ ರೂಪಗಳು ಪರಿಪೂರ್ಣ ವಾಸ್ತವತೆಯನ್ನು ಹೊಂದಿವೆ ಎಂದು ಹೇಳಲಾಗದಾದರೂ ಭಾವಚಿತ್ರಗಳಾಗಿವೆ ಎಂದಂತೂ ಹೇಳ ಬಹುದು. ನಮ್ಮ ದೇಶದ ಇತಿಹಾಸ ಪೂರ್ವ ಶಿಲಾಶ್ರಯ (Rock Shelters) ಚಿತ್ರಗಳಲ್ಲಿ ಮನುಷ್ಯನ ಭಾವ ಚಿತ್ರಣಗಳು ಕೌತು ಕಮಯ ಪ್ರಾರಂಭವನ್ನು ಕಂಡಿವೆ. ಈಗಾಗಲೇ ಭಾರತೀಯ ಇತಿಹಾಸದ ಮೊದಲ ಅಧ್ಯಾಯವಾಗಿ ಸೇರ್ಪಡೆಗೊಂಡಿರುವ ಮಧ್ಯಪ್ರದೇಶದ ಭೀಂಬೇಟ್ಕಾ ಇತ್ತೀಚೆಗೆ (2003) ವಿಶ್ವ ಪರಂಪರೆಯ ಪಟ್ಟಿಗೂ ಸೇರಿಹೋಗಿದೆ. ಇತ್ತೀಚಿನ ಅಧ್ಯಯನಗಳ ಫಲವಾಗಿ ಮತ್ತಷ್ಟು ಪ್ರಾಚಿನತೆಯನ್ನು ಪಡೆದುಕೊಳ್ಳುವ ಸಾಧ್ಯತೆಗಳು ಹೆಚ್ಚಾಗಿವೆ. ಇದೇ ದೃಷ್ಟಿಯಿಂದ ರಾಯಚೂರಿನ ಕುಮತಿಯ ಹೊಸ ಶಿಲಾಯುಗದ ಗ್ರಾನೈಟ್ ಕಲ್ಲಿನ ಎರಡು ಶಿಲ್ಪಗಳು ಕನ್ನಡದ

ಶಿಲ್ಪಕಲೆಯ ಮೊದಲ ಅಧ್ಯಾಯಕ್ಕೆ ಸೂಕ್ತ ಲಕ್ಷಣಗಳನ್ನು ಹೊಂದಿವೆ. 8-10 ಅಡಿಗಳ ಎತ್ತರದ, ತೆರೆದ ಬಯಲಿನಲ್ಲಿ ನಿಂತಿರುವ ಈ ಶಿಲ್ಪಗಳ ಭಾವರೂಪ ಗ್ರಹಿಕೆ ಕುತೂಹಲವನ್ನು ಉಂಟು ಮಾಡುವಂತಿದೆ. ಅವುಗಳ ಮುಖ ಭಾವಗ್ರಹಿಕೆ, ಇಡೀ ಶಿಲ್ಪದ ದೇಹಭಾಷೆಯ ಕಲ್ಪನೆ ಆಕರ್ಷಕ. ಗುಲ್ಬರ್ಗಾ ಪ್ರದೇಶವೇ ಏಕೆ, ಇಡೀ ಭಾರತದಲ್ಲಿ ಈ ಶಿಲ್ಪಗಳು ತಮ್ಮ ಕಾಲ, ರೂಪ, ಸಂದರ್ಭಗಳ ದೃಷ್ಟಿಯಿಂದ ವಿಶೇಷ ಮಹತ್ವ ಹೊಂದಿವೆ. ಸೂಕ್ಷ್ಮ ಶಿಲಾಯುಗದ ಬೆಳಗಾಂ ಜಿಲ್ಲೆಯ ರಾಮದುರ್ಗ, ಬಾದಾಮಿ, ಐಹೊಳೆಗಳ ಹಲವು ಶಿಲಾಶ್ರಯಗಳ ಮನುಷ್ಯ ರೂಪಗಳು ನಮ್ಮ ಸಮಕಾಲೀನ ಭಾವ ಚಿತ್ರಕಲೆಯ ಒಂದು ಪೂರ್ವಭಾವಿ ಹಂತ ಎಂದು ಹೇಳಲಾರೆನಾದರೂ ಅಷ್ಟೇ ಕುತೂಹಲಕಾರಿಯಾಗಿವೆ.



*ಚಿತ್ರ-49 : ಆಸ್ಟ್ರೇಲಿಯಾದ ನರ್ತಕ, ನೃತ್ಯ ಸಂಯೋಜಕ ಲಾಯ್ಡ್ ನ್ಯೂಸನ್ ನ ಭಾವಚಿತ್ರ - ಪಾಲಿ ಬೋರ್ಲ್ಯಾಂಡ್, ಮಾಧ್ಯಮ : ಛಾಯಾಚಿತ್ರ, 2000.*
*(ಕೃಪೆ : National Portrait Gallery Publications, National Portrait Gallery, London).*

ಸೂಕ್ಷ್ಮ ಚೆಲುವಿನ, ಸಾಂಕೇತಿಕ ಮಾನವಾಕೃತಿಗಳು ನೂತನ ಶಿಲಾಯುಗದ ಹಂತದಲ್ಲಿ ಸಾಮಾಜಿಕವಾಗುತ್ತ ನೈಜ ಪ್ರತಿಕೃತಿಯಂತೆ ಚಿತ್ರಿಸಲು ಅಂದಿನ ಚಿತ್ರಕರು ಪ್ರಯತ್ನಿಸಿದ್ದಾರೆ. ಈ ಅಂಶವನ್ನು ಗುಲ್ಬರ್ಗಾ, ರಾಯಚೂರು, ಬಳ್ಳಾರಿ ಪ್ರದೇಶಗಳ ಚಿತ್ರಗಳಲ್ಲಿ ಗಮನಿಸಬಹುದು. ಬೇಟೆಯಾಡುವ ಸಾಕುವ ಪ್ರಾಣಿಗಳನ್ನು ಪ್ರೀತಿಸು ವಂತೆಯೇ ಮಾನವ ರೂಪಗಳನ್ನು ಆಸಕ್ತಿಯಿಂದ ಗ್ರಹಿಸಿ ಚಿತ್ರಿಸಲಾಗಿದೆ. ರಾಯಚೂರಿನ ಪಿಕ್ಲಿಹಾಳ, ಬೈಲ್ ಮರ್ಚೇಡ್, ಮಲ್ಲಾಪುರ, ಗುಲ್ಬರ್ಗಾ



*ಚಿತ್ರ-50 : 'ದಕ್ಷಿಣ ಭಾರತದ ಮಹಿಳೆಯರು,' ಸ್ವ-ಅಭಿವ್ಯಕ್ತಿ, ಎಸ್. ಪುಷ್ಪಮಾಲಾ, ಮಾಧ್ಯಮ : ಛಾಯಾಚಿತ್ರ, 2004.*

ಜಿಲ್ಲೆಯ ಯಾದಗೀರ್ ಬಳಿಯ ಬಳಿಚಕ್ರಗಳ ಮಾನವ ರೂಪಗಳು ಈ ಅಂಶವನ್ನು ಸ್ಪಷ್ಟ ಪಡಿಸುತ್ತವೆ.

ನಮ್ಮ ಬಹುತೇಕ ಇತಿಹಾಸ ಪೂರ್ವ ಶಿಲಾಶ್ರಯಗಳ ಮಾನವ ರೂಪಗಳು ನಿಂತಭಂಗಿಯಲ್ಲಿವೆ. ರಾಯಚೂರಿನ ಹಿರೆಬೆನಕಲ್‌ನ 3 ನೆಯ ವರ್ಣಚಿತ್ರ ಗುಹೆಯ ಏಕವ್ಯಕ್ತಿ



*ಚಿತ್ರ-51 : ಭಾವಶಿಲ್ಪ, - ಜಾನ್‌ದೇವರಾಜ್, ಮಾಧ್ಯಮ : ಟೆರಾಕೋಟ, ಡಿಸೆಂಬರ್ 1994.*

ಚಿತ್ರಗಳು 2 ಮೀಟರ್ ಎತ್ತರವಿವೆ; ನಗ್ನ ದೇಹಗಳವು, ಮಲ್ಲಾಪುರ, ಚಿಕ್ಕರಾಮಾಪುರಗಳಲ್ಲೂ ಒಂದೊಂದು ಕೆಂಗಾವಿ ಬಣ್ಣದ ಛಾಯೆಯ ರೇಖಾ ದೇಹಾಕಾರಗಳ ಮನುಷ್ಯ ರೂಪಗಳಿವೆ. ಮಲ್ಲಾಪುರದ ಶಿಲಾಶ್ರಯದಲ್ಲಿ 7-8 ಅಡಿ ಉದ್ದದ ದೊಡ್ಡ ದೇಹದ, ಕೆಂಗಾವಿ ಬಣ್ಣದ ಗಂಡಿನ ದೇಹ ಚಿತ್ರಿತ ಗೊಂಡಿದೆ. ಬೃಹತ್ ಶಿಲಾಯುಗದ ಈ ಗುಹೆಯಲ್ಲಿಯೇ ಮನುಷ್ಯ ರೂಪಗಳ ರೇಖಾ ಭಾವಚಿತ್ರಣ ಹೆಚ್ಚಿನ ವೈವಿಧ್ಯತೆಯಿಂದ ಮೂಡಿಬಂದಿದೆ. ಚಿಕ್ಕರಾಮಪುರದ ಒನಕೆಯ ಕಿಂಡಿ ಪ್ರದೇಶದ ಶಿಲಾಶ್ರಯಗಳಲ್ಲೊಂದರಲ್ಲಿಯೂ ಇಂತಹ ಮಾನವರೂಪವನ್ನು ಗಮನಿಸಬಹುದು.

ಗುಲ್ಬರ್ಗಾದ ಯಾದ್‌ಗೀರ್ ಬಳಿಯ ಬಳಿಚಕ್ರ (ಬಲಚಕ್ರ)ದಲ್ಲಿ ಮೂರು ಕಾಲಘಟ್ಟಗಳಲ್ಲಿ ಅಂದರೆ ಇತಿಹಾಸ ಪೂರ್ವಕಾಲ, ಬಾದಾಮಿ ಚಾಲುಕ್ಯರ ಪೂರ್ವಕಾಲ ಹಾಗೂ ಬಾದಾಮಿ ಚಾಲುಕ್ಯರ ಆನಂತರದ ಕಾಲಗಳಲ್ಲಿ ಚಿತ್ರಿಸಿಕೊಂಡ ಬೃಹತ್ ಬಂಡೆಯನ್ನು



*ಚಿತ್ರ-54 : ಒಂದು ಭಾವಚಿತ್ರ - ಕಾಳಿದಾಸ್ ಪತ್ತಾರ್*
*ಮಾಧ್ಯಮ : ತೈಲವರ್ಣ, 2004.*

ಕ್ಯಾನ್‌ವಾಸ್ ಆಗಿ ಹೊಂದಿರುವ ಕಲ್ಲಾಸರೆ ಇದೆ. ಆ ಹಳ್ಳಿಯ ಪೂರ್ವಕ್ಕೆ ಇರುವ ಗುಡ್ಡದ ಮೇಲೆ ಈ ಚಿತ್ರಗಳಿವೆ. ಇಲ್ಲಿನ ವೈವಿಧ್ಯಮಯ ರೇಖಾ ಚಿತ್ರಗಳಲ್ಲಿ ಮನುಷ್ಯರೂಪದ ಕಲ್ಪನೆ ಅಪೂರ್ವ. 4 ಹಂತಗಳಲ್ಲಿ ಈ ವ್ಯಕ್ತಿ ಚಿತ್ರಗಳು ಬೆಳವಣಿಗೆ ಯಾಗಿವೆ. ಪ್ರಾರಂಭದ ದಷ್ಟಪುಷ್ಟ ದೇಹಾಕಾರದ ಮಾನವ ರೂಪ ಚಿತ್ರಣ 4ನೆಯ ರೀತಿಯ ಚಿತ್ರಣದ ಹಂತದ ಹೊತ್ತಿಗೆ ಸಾಂಕೇತಿಕ ರೇಖಾ ಭಾವ ಚಿತ್ರಗಳಾಗಿ ರೂಪಾಂತರಗೊಂಡಿವೆ. ಈ ರೂಪಾಂತರವನ್ನು ಅಧ್ಯಯನ ಮಾಡಿದರೆ ಮಹತ್ವದ ಅಂಶಗಳು ಹೊರಬೀಳುವ ಸಾಧ್ಯತೆಗಳಿವೆ. ಗಂಭೀರ ನೆಲೆಯ ಈ ಭಾವರೂಪ ಕಲ್ಪನೆಗಳು ಕೆಂಗಾವಿ ಬಣ್ಣದ ರೇಖೆಗಳಿಂದ ಚಿತ್ರಿಸಲ್ಪಟ್ಟಿವೆ.

ಕ್ರಿಸ್ತ ಪೂರ್ವ 2500 ರಲ್ಲೇ ಟರಾಕೋಟ, ಕಂಚು, ಕಲ್ಲು ಇತ್ಯಾದಿ ಮಾಧ್ಯಮಗಳಲ್ಲಿ ಭಾವಶಿಲ್ಪಗಳನ್ನು ನಾವು ಗಮನಿಸಬಹುದು. ನಂತರದಲ್ಲಿ ಮೂಡಿ ಬಂದ ಬುದ್ಧ, ಮಹಾವೀರ, ಅವನ ಸಮಕಾಲೀನ ಅನುಯಾಯಿಗಳ ಭಾವಚಿತ್ರಗಳು ಒಂದು ರೀತಿಯಲ್ಲಿ ಧರ್ಮ-ದೈವಗಳನ್ನು ನೆನಪಿಸುತ್ತವೆ. ಹಾಗೆಯೇ ಪುರಾಣಗಳಲ್ಲಿ ಬರುವ ರಾಜ ಮಹಾರಾಜರ ರೂಪಗಳು, ದ್ವಾರ ಪಾಲಕರ ಮೂರ್ತಿಗಳು, ನದೀ ದೇವತೆಗಳು ಇವೆಲ್ಲ ರಾಜಮನೆತನಕ್ಕೆ ಸೇರಿದ ದಾನಿಗಳ ಭಾವಚಿತ್ರಗಳೇ ಆಗಿವೆ. ಇಹಲೋಕ ತ್ಯಜಿಸಿದ ರಾಜ-ರಾಣಿ ಮೊದಲಾದವರು ಶಿವ, ವಿಷ್ಣು, ಬ್ರಹ್ಮ, ಮೊದಲಾದವರನ್ನು ಪ್ರತಿನಿಧಿಸುವಂತೆ ಚಿತ್ರಿಸಿರುವುದನ್ನು

ಇಂಡೋನೇಷಿಯಾದಲ್ಲಿ ಗಮನಿಸಬಹುದಾಗಿದೆ. ನಮ್ಮ ಸಂಸ್ಕೃತಿಯ ಒಂದು ಕೊಂಬೆಯೇ ಆ ದೇಶವಾಗಿದೆ. ಹೀಗಾಗಿಯೇ ಇಂತಹ ಭಾವಚಿತ್ರಣ ನಮ್ಮಲ್ಲೂ ಕಾಣಬಹುದಾಗಿದೆ.



*ಚಿತ್ರ-52 : ಇಂದರ್ ಸಲೀಮ್,*
*ಛಾಯಾಚಿತ್ರ : ಲಾರಾ ಮಾರ್ಟಿನ್, 2004.*

ನಿಜವಾದ ಅರ್ಥದಲ್ಲಿ ಭಾರತದ ಮೊದಲ ಭಾವಚಿತ್ರಗಳು ಯಕ್ಷ ಶಿಲ್ಪಗಳ ರೂಪದಲ್ಲಿ ಪಾಟ್ನಾದ ಅತ್ತಿತ್ತ ದೊರಕಿವೆ. ಕ್ರಿಸ್ತಶಕ 1 ನೆಯ ಶತಮಾನದಿಂದೀಚೆಗೆ ಮಹಾದಾನಿಗಳಶಿಲ್ಪಗಳು ಮತ್ತು ಉಬ್ಬುಶಿಲ್ಪಗಳು ಕಾಣಿಸಿಕೊಂಡಿವೆ. ಕ್ರಿಸ್ತ ಶಕ 1ನೆಯ ಶತಮಾನದಿಂದ 3ನೆಯ ಶತಮಾನದ ಮೊದಲ ಭಾಗದ ಕಾಲದಲ್ಲಿ ಭಾವಚಿತ್ರಗಳು ಮೂಡಿ ಬಂದಿವೆ. ಆದರೂ ದಕ್ಷಿಣದ ಶಾತವಾಹನರ ಆಳ್ವಿಕೆಯ ಕಾಲದ ಬಹುತೇಕ ರೂಪಶಿಲ್ಪಗಳು ನಾಶಗೊಂಡಿವೆ. ಮುಂಬಯಿಯ ನಾನಾ ಘಟ್ಟ ಪ್ರದೇಶದ ಕಾರ್ಲಿ, ಕನ್ಹೇರಿ ಗುಹೆಗಳ ಪ್ರವೇಶ ದ್ವಾರಗಳಲ್ಲಿರುವ ಎತ್ತರದ ಉಬ್ಬು ಶಿಲ್ಪಗಳು ರಾಜಾ ಗೌತಮಿಪುತ್ರ ಶಾತಕರ್ಣಿ, ಪುಲುಮಾಯಿ ವಿಶಿಷ್ಟ ಪುತ್ರ ಮತ್ತು ರಾಣಿ ಬಾಲಶ್ರೀ ಗೌತಮಿಯವರುಗಳನ್ನು ಪ್ರತಿನಿಧಿಸುತ್ತವೆಂದು ಹೇಳಲಾಗಿದೆ. ಇದೇ ಕಾಲದ ಮಧುರಾಬಳಿಯ ಶಿರವಿಲ್ಲದ ಶಿಲ್ಪಗಳು ಕುಶಾನ ಚಕ್ರವರ್ತಿಗಳು ಕಾನಿಷ್ಕ, ಹುವಿಷ್ಕ ಮೊದಲಾದವರದು ಎನ್ನಲಾಗಿದೆ. ಬೋಧಿಸತ್ವರ, ಲೋಕಪಾಲರುಗಳ ಅಥವಾ ದಾನಿಗಳ ಭಾವ ಶಿಲ್ಪಗಳಿಂದ ಬೇರ್ಪಟ್ಟಿರಬಹುದಾದ ಮುಖಗಳು ಮಧುರಾ ಸುತ್ತಮುತ್ತ ದೊರೆತಿವೆ.

ಹಾಗೆಯೇ ಕುಶಾನ ಚಕ್ರವರ್ತಿಗಳ, ಅವರಿಗಿಂತ ಮೊದಲಿದ್ದ ಇಂಡೋಗ್ರೀಕ್ ರಾಜರ ಭಾವಚಿತ್ರಗಳಿರುವ ನಾಣ್ಯಗಳೂ ದೊರಕಿವೆ. ಗ್ರೀಕ್ ಸಂಪ್ರದಾಯದ ಕೊರೆದು (engrave) ಮಾಡಿದ ರೇಖಾ ಭಾವಚಿತ್ರಗಳಿವು.

ಗುಪ್ತಚಕ್ರವರ್ತಿಗಳು ರೋಮನ್ ನಾಣ್ಯಗಳಿಂದ ಸ್ಫೂರ್ತಿಗೊಂಡನಾಣ್ಯಗಳನ್ನು ಹೊಂದಿದ್ದರಾದರೂ ನಂತರದಲ್ಲಿ ಭಾರತೀಯ ರೂಪಗಳಿಂದ ಸ್ಥಳಾಂತರ ಮಾಡಿದರು. ಕೆಲವೊಮ್ಮೆ ಚಕ್ರವರ್ತಿಯ ಭಾವಚಿತ್ರಗಳು ಕುಳಿತ, ನಿಂತ ಭಂಗಿಯಲ್ಲಿರುತ್ತಿದ್ದವು. ಅಪರೂಪಕ್ಕೆ ಚಕ್ರವರ್ತಿನಿಯ ಜತೆಗೂ ಇರುವ ನಾಣ್ಯಗಳಿವೆ. ಚಕ್ರವರ್ತಿ ಒಂದನೆಯ ಕುಮಾರುಗುಪ್ತನ ಭಾವರೂಪವಿರುವ ಮುದ್ರೆಯೊಂದು ದೊರೆತಿದೆ.

*ಚಿತ್ರ-55 : ಒಂದು ಅಭಿವ್ಯಕ್ತಿ, - ಯೂಸೂಫ್ ಅರಕ್ಕಲ್ ಮಾಧ್ಯಮ : ಕಂಪ್ಯೂಟರ್,* ಚಿತ್ರ-55





*ಚಿತ್ರ-56 : ಭಾವಚಿತ್ರಗಳು, - ಎಂ.ಸಿ. ಚೆಟ್ಟಿ ಮಾಧ್ಯಮ : ಮಿಶ್ರ, 1986.*

ಮಧ್ಯಕಾಲೀನ ಹಿಂದೂ ನಾಣ್ಯಗಳು ಈ ಭಾವರೂಪಗಳಿಗೆ ಬದಲಾಗಿ ಬಿಂದುಗಳನ್ನು ಹೊಂದಿಸಿಕೊಂಡವು. ಗುಪ್ತರ ಕಾಲದಲ್ಲಿ ಭಾವಚಿತ್ರಕಲೆ ಉನ್ನತ ಮಟ್ಟದಲ್ಲಿತ್ತು. ಸಾಹಿತ್ಯದ ಮೂಲಗಳಿಂದಲೂ ಈ ಅಂಶವನ್ನು ಗುರುತಿಸಬಹುದಾಗಿದೆ. ಉನ್ನತ ಹಂತದ ಪ್ರತಿ ವ್ಯಕ್ತಿಗೂ, ರಾಜರ ಆಸ್ಥಾನದ ವ್ಯಕ್ತಿಗಳಿಗೂ, ಗುರುತು ಹಿಡಿಯಲು ಸಾಧ್ಯವಾಗುವಂತೆ ಭಾವಚಿತ್ರ



ಚಿತ್ರ-57 : ಭಾವಚಿತ್ರ, - ಕೆ.ಎನ್. ರಾಮಚಂದ್ರನ್ ಮಾಧ್ಯಮ : ತೈಲವರ್ಣ.



ಚಿತ್ರ-58 : ಚಿತ್ರದುರ್ಗದ ಮದಕರಿನಾಯಕನ ಭಾವ ಶಿಲ್ಪ, - ತೇಜೇಂದ್ರಸಿಂಗ್ ಬೌನಿ. ಜೇಡಿ ಮಣ್ಣಿನ ಮಾದರಿ, 2002.

ರೇಖಿಸುವ ಅಭ್ಯಾಸ ಇದ್ದಿತು. ಇದು ರಾಜಕೀಯ ಉದ್ದೇಶಕ್ಕೆ ಅನುಕೂಲವಾಗಲು ಇದ್ದಿತಾದರೂ ಸೌಂದರ್ಯ ಪ್ರಜ್ಞೆಯತ್ತಲೂ ಅವರೆಲ್ಲರ ಒಲವು ಹರಿಯುವ ಸಾಧ್ಯತೆ ಇದ್ದೇ ಇದ್ದಿತು; ಆದರೂ ಇಂದು ಅಂತಹ ಭಾವಚಿತ್ರ ರೇಖಣೆಗಳಾವುವೂ ಉಳಿದು ಬಂದಿಲ್ಲ.



*ಚಿತ್ರ-59 : ಆದಿಮೂಲಂರವರಿಂದ ಮೂಡಿ ಬಂದಿರುವ ಒಂದು ರೇಖಾ ಭಾವಚಿತ್ರ, 1989.*

ಗುಲ್ಬರ್ಗಾ ಜಿಲ್ಲೆಯ ಚಿತ್ತಾಪುರ ತಾಲ್ಲೂಕಿನ ಸನ್ನತಿಯ ಬೌದ್ಧಸ್ತೂಪದ ಶಿಲ್ಪಗಳು ಇತಿಹಾಸ ಪ್ರಾರಂಭಕಾಲದ ಭಾವಶಿಲ್ಪ-ಭಾವಚಿತ್ರಗಳನ್ನು ಹೊಂದಿವೆ. ಮಹಾಂಕಾಳ ಹಾಗೂ ಅಕ್ಕುಜ್ಜಾ ಎಂಬ ಖ್ಯಾತ ಶಿಲ್ಪಿಗಳ ಕಾರ್ಯಕ್ಷೇತ್ರವಾಗಿದ್ದ ಸನ್ನತಿಯಲ್ಲಿ ಆಂಧ್ರಪ್ರದೇಶದ ಅಮರಾವತಿ ಹಾಗೂ ನಾಗಾರ್ಜುನ ಕೊಂಡಗಳ ಸಮಕಾಲೀನ ಅಂದರೆ ಕ್ರಿಸ್ತಪೂರ್ವ 2-1 ನೆಯ ಶತಮಾನಗಳ ಉಬ್ಬುಶಿಲ್ಪಕಲೆ ಇದೆ. ಸ್ಥಳೀಯ ಶಿಲೆಯನ್ನು ಅತಿ ಕೋಮಲವಾಗಿ ಸ್ತೂಪದ ಮೇಲ್ಮೈನಲ್ಲಿ ಅಲಂಕರಿಸಲು ದುಡಿಸಿಕೊಳ್ಳಲಾಗಿದೆ. ಇಲ್ಲಿನ ರಾಜ ರಾಣಿಯರ ಗುಂಪು ಉಬ್ಬುಭಾವ ಶಿಲ್ಪಗಳನ್ನೂ ಗುರುತಿಸ ಬಹುದು. ಸ್ತೂಪದ ಕಟಕಟೆಯ ಕಂಬದ ಮೇಲಿನ ಉಬ್ಬು ಅವಕಾಶದಲ್ಲಿನ ಮಾನವರೂಪಗಳು ಆಕರ್ಷಕ. ಇದೇ ಅವಧಿಯ ಸ್ಮಾರಕ ಶಿಲೆಗಳಲ್ಲಿ ದಾನಿಗಳಾದ ದಂಪತಿಗಳ ಉಬ್ಬುಭಾವಶಿಲ್ಪಗಳನ್ನು ಗಮನಿಸಬಹುದು. ಬಹುತೇಕ ಬೆತ್ತಲೆ



*ಚಿತ್ರ-60 : ರಾಯಚೂರಿನ ಖಾಜನಗೌಡರ ಮನೆಯ ಭಿತ್ತಿಚಿತ್ರ, 1928.*

ರೂಪದ ಹೆಣ್ಣಿನ ಭಾವಶಿಲ್ಪಗಳೂ ಇವೆ. Nude Portraiture ಗೆ ಅಂದಿನ ಅತ್ಯುತ್ತಮ ಉದಾಹರಣೆಗಳವು.

ಅಜಂತಾ ಗುಹೆಗಳ ಭಾವಚಿತ್ರಗಳಲ್ಲಿ ಗುಪ್ತರ ಸಮಕಾಲೀನರಾದ ವಾಕಾಟಕ ಅಥವಾ ಕಳಚೂರ್ಯ ವಂಶಗಳ ರಾಜರ ಗುರುತುಗಳನ್ನು ಸ್ಪಷ್ಟವಾಗಿ ಹುಡುಕಲಾಗದು. IIನೆಯ ವಿಹಾರದಲ್ಲಿರುವ ರಾಜನ ದರ್ಬಾರಿನ ದೃಶ್ಯವೊಂದರಲ್ಲಿನ ವ್ಯಕ್ತಿಗಳನ್ನು ಹಲವು ರೀತಿಗಳಲ್ಲಿ ಗುರುತಿಸಲಾಗಿದೆ. ಪರ್ಶಿಯಾದ IIನೆಯ ಖುಸ್ರುವಿನ ರಾಯಭಾರಿಯನ್ನು ಸ್ವಾಗತಿಸುತ್ತಿರುವ ಚಾಲುಕ್ಯರ ಚಕ್ರವರ್ತಿ IIನೆಯ ಪುಲಿಕೇಶಿ ಎಂತಲೂ ಉತ್ತರ ದಿಕ್ಕಿನ ರಕ್ಷಕ ಕುಬೇರನೆಂದೂ ಸಹ ಹೇಳಲಾಗಿದೆ. ಈ ವಿವರಣೆಗಳು ಪರಸ್ಪರ ವಿಶೇಷವನ್ನೇನೂ ಹೊಂದಿಲ್ಲ. 26 ನೆಯ ಗುಹೆಯೊಂದರಲ್ಲಿ ಬುದ್ಧನ ಪಾದಗಳ ಬಳಿ ಗೋಳಾಡುತ್ತಿರುವ ಗುಂಪಿನ ಭಾವಶಿಲ್ಪಗಳಿವೆ.

ಪಲ್ಲವರ ಮಹಾ ಬಲಿಪುರಂ ಮತ್ತು ಸಿತ್ತನ್‌ವಾಸನ್‌ಗಳಲ್ಲಿ ಕ್ರಮವಾಗಿ ತಮ್ಮ ರಾಣಿಯರೊಂದಿಗೆ ಸಿಂಹ ವಿಷ್ಣು (ಕ್ರಿ.ಶ. ಸುಮಾರು 574-600) ಹಾಗೂ Iನೆಯ ಮಹೇಂದ್ರ ವರ್ಮರ ಭಾವರೂಪಗಳನ್ನು ಕೆತ್ತಲಾಗಿದೆ.

ಮಹಾಬಲಿಪುರಂನ ಕಡಲ ತೀರದ ದೇವಾಲಯ ಹಾಗೂ ಕಾಂಚೀಪುರದ ವೈಕುಂಠ ಪೆರುಮಾಳ್ ದೇವಾಲಯಗಳ ಉಬ್ಬು ಶಿಲ್ಪಗಳಲ್ಲಿ ಪಲ್ಲವ ದೊರೆಗಳ ಭಾವಚಿತ್ರಗಳು

ಸಹಜತೆಗೆ ಹತ್ತಿರವಾಗಿ ಗ್ರಹಿಸಲ್ಪಟ್ಟಿವೆ.

ಬಾದಾಮಿಯ ಚಾಲುಕ್ಯರ ಕಾಲದ ಬಾದಾಮಿ, ಪಟ್ಟದಕಲ್ಲು, ಐಹೊಳಗಳಲ್ಲಿ ಉಬ್ಬು ಭಾವಶಿಲ್ಪಗಳೇ ಅಲ್ಲದೆ ಭಿತ್ತಿಚಿತ್ರಗಳೂ ಮೂಡಿಬಂದಿವೆ.

ಬಾದಾಮಿಯ 3 ನೆಯ ಗುಹೆಯ ಕಡುಮಾಡಿನ ಮುಚ್ಚಿಗೆಯಲ್ಲಿರುವ ಚಿತ್ರಗಳು 6ನೆಯ ಶತಮಾನದ ಕೊನೆಯ ಕಾಲದವು. ಆಸ್ಥಾನದ ಚಿತ್ರವೊಂದರ ಮುಂಭಾಗದಲ್ಲಿ ದೊರೆ, ಅವನ ಅರಸಿ, ಪರಿವಾರಗಳು ಇವೆ. ಹಿನ್ನೆಲೆಯಲ್ಲಿ ಎತ್ತರದಲ್ಲಿ ಇಂದ್ರನೇ ಒಡ್ಡೋಲಗ ಸಹಿತನಾಗಿ ಚಾಲುಕ್ಯ ದೊರೆ ಕೀರ್ತಿವರ್ಮನನ್ನು ಹರಸುವಂತೆ ಚಿತ್ರಿಸಲ್ಪಟ್ಟಿದೆ. ಸಿಂಹಾಸನದಲ್ಲಿ ಕುಳಿತಿರುವ ಕೀರ್ತಿ ವರ್ಮನ ಮುಂದೆ ರಾಣಿ ಒಂದು ಕಾಲನ್ನು ಮಡಿಚಿ ಇನ್ನೊಂದನ್ನು ಮುಂದಕ್ಕೆ ಚಾಚಿ ಕುಳಿತ್ತಿದ್ದಾಳೆ. ಇಲ್ಲಿ ರಾಣಿ, ಸೇವಕಿಯರ ಮುಖಗಳ ಭಾವಗಳಲ್ಲಿ ವಿವಿಧತೆ ಇದೆ. ಪರಿವಾರದವರನ್ನು ಚಿತ್ರಿಸಿರುವ ರೀತಿಯಲ್ಲಿ ಭಾವಚಿತ್ರ ವೈಭವವಿದೆ. ಚಾಲುಕ್ರರ ಪ್ರಸಿದ್ಧ

*ಚಿತ್ರ-61 : ಆರ್ಟ್ ನ್ಯೂಸ್‌ನ ಒಂದು ಪ್ರಚಾರ ಪತ್ರ*

Save $46

Send me one year (11 issues) of ARTnews, including the special ARTnews 200 collectors issue, for just $19.98. I'll save more than 69% off the $66 single copy price.

NAME

ADDRESS

☐ Payment enclosed ☐ Bill me

69%

OFF COVER PRICE

ARTnews

Mona's Smile

Does she need a face-lift?

The Clintons' Cl...



ಚಿತ್ರ-62 : 'ಅವನು' - ಎಸ್.ಜಿ. ವಾಸುದೇವ್, ಇಂಕ್ ರೇಖಾಚಿತ್ರ, 1992.



ಚಿತ್ರ-63 : ಶಾಕುಂತಲಾ ಪತ್ರ ಲೇಖನ - ರಾಜ ರವಿವರ್ಮ ಮಾಧ್ಯಮ : ತೈಲವರ್ಣ. (ಕೃಪೆ ಶ್ರೀ ಜಯಚಾಮರಾಜೇಂದ್ರ ಕಲಾಗ್ಯಾಲರಿ, ಮೈಸೂರು.)

ಅರಸ VIನೆಯ ವಿಕ್ರಮಾದಿತ್ಯನ ಮಗ IIIನೆಯ ಸೋಮೇಶ್ವರ ನ (ಕ್ರಿ.ಶ 1127-1139) ತಾಯಿ ಚಂದಲದೇವಿ ಗುಲ್ಬರ್ಗ ಜಿಲ್ಲೆಯ ಇಂದಿನ ಅಳಂದದಿಂದ 1000 ಹಳ್ಳಿಗಳ ರಾಜ್ಯವನ್ನು ಆಳುತ್ತಿದ್ದಳು. ಇವನಿಂದ 'ಅಭಿಲಷಿತಾರ್ಥ ಚಿಂತಾಮಣಿ' ಅಥವಾ 'ಮಾನಸೋಲ್ಲಾಸ' ಮೂಡಿಬಂದಿತು. ಅಂದಿನ ಸಮಕಾಲೀನ ಸಾಂಸ್ಕೃತಿಕ ವಿಶ್ವಕೋಶ ಅದು. ಸುಮಾರು 8000 ಶ್ಲೋಕಗಳಿವೆ. ಭಾವಚಿತ್ರದ ಬಗ್ಗೆ ಪ್ರಸ್ತಾಪವಿದೆ. ಸರ್ವಚಿತ್ರ ವ್ಯಾಕರಣ ವಿಭಾಗದ 902 ನೆಯ ಶ್ಲೋಕದಲ್ಲಿ "ಯಾವ ಚಿತ್ರವನ್ನು ನೋಡಿದ ಮಾತ್ರದಿಂದಲೇ ಶೃಂಗಾರ ಮೊದಲಾದ ರಸಗಳು ನಮ್ಮ ಗಮನಕ್ಕೆ ಬರುವವೋ " 903 ನೆಯ ಶ್ಲೋಕ ; "ಅಂತಹ ಚಿತ್ರವನ್ನು ಭಾವಚಿತ್ರ ಎಂದು ಹೇಳಲಾಗಿದೆ" ಎಂದು ಸೋಮೇಶ್ವರನ್ನು ದಾಖಲಿಸಿದ್ದಾನೆ. ಈ ಮಾತುಗಳು ಅದೇ ಸಂದರ್ಭದಲ್ಲಿ ಇದ್ದ ದೃಶ್ಯಕಲೆಯ ಬರೆಹಗಾರ "ಚಿತ್ರ ವಿದ್ಯಾವಿರಿಂಚಿ ಭೂಲೋಕ ಮಲ್ಲ ದೇವನ ಅಭಿಪ್ರಾಯಗಳಾಗಿವೆ" ಎಂದೂ ಹೇಳಿಬಿಟ್ಟಿದ್ದಾನೆ.



*ಚಿತ್ರ-64 : 'ಚಿನ್ನದ ಕನಸುಗಳಲ್ಲಿ...' - ಎನ್. ಪುಷ್ಪಮಾಲಾ, ಮಾಧ್ಯಮ : ಛಾಯಾಚಿತ್ರ, 2002.*

ಪಟ್ಟದ ಕಲ್ಲಿನ ಉಬ್ಬುಶಿಲ್ಪಗಳಲ್ಲಿ ಪೋಷಕರಾದ IIನೆಯ ವಿಕ್ರಮಾದಿತ್ಯ (ಸು. ಕ್ರಿ.ಶ. 743-47) ತನ್ನ ರಾಣಿಯರು ಲೋಕ ಮಹಾದೇವಿ ಮತ್ತು ತ್ರೈಲೋಕ್ಯಮಹಾದೇವಿಯವರುಗಳು ಜತೆಗಿರುವ ಉಬ್ಬುಭಾವರೂಪಗಳಿವೆ.



*ಚಿತ್ರ-65 : ಅಲ್‌ಫೋನ್ಸೋರ ಗಾಂಧಿ, ಮಾಧ್ಯಮ : ತೈಲವರ್ಣ.*



*ಚಿತ್ರ-47 : ದ.ರಾ.ಬೇಂದ್ರೆ, ಭಾವಶಿಲ್ಪ, ಎಸ್. ಜಗನ್ನಾಥ ಜಕ್ಕಪಲ್ಲಿ, 2004.*



*ಚಿತ್ರ-66 : "ಈ ರಾತ್ರಿ...." - ರವಿಕುಮಾರ್ ಕಾಶಿ, ಮಾಧ್ಯಮ : ಮಿಶ್ರಮ.*
*ಆಕಾರ : 8 ಅಡಿ x 12 ಅಡಿ, 2001.*

ಹಾಗೆಯೇ ಉತ್ತರ ಪ್ರದೇಶದ ದೇವಗಡ ದೇವಾಲಯದಲ್ಲಿ ಗುಪ್ತ ವಂಶದ ಕೊನೆಯ ಚಕ್ರವರ್ತಿಗಳನ್ನು ನೆನಪುಮಾಡುವ ಭಾವ ಶಿಲ್ಪಗಳೂ ಇವೆ. ಗ್ವಾಲಿಯಾರ್‌ನಲ್ಲಿ ಕನೂಜಿನ ರಾಜ ಯಶೋವರ್ಮನ ರಾಣಿಯರನ್ನು ಪ್ರತಿನಿಧಿಸುವ ರೂಪಗಳೂ ಇವೆ.

ಮಧ್ಯಕಾಲೀನ ಸಂದರ್ಭದಿಂದಲೇ ಉತ್ತರ ಭಾರತ ಹಾಗೂ ದಕ್ಷಿಣ ಭಾರತದ ಹಲವು ದೇವಾಲಯಗಳಲ್ಲಿ ಪೋಷಕ/ದಾನಿಗಳ ಭಾವಶಿಲ್ಪಗಳು, ಉಬ್ಬುಶಿಲ್ಪಗಳು ಮೂಡಿಬಂದಿವೆ. ದಿಲ್‌ವಾರದ ಕುಂಭಾರಿಯಾ ದೇವಾಲಯಗಳಲ್ಲಿ ಗುಜರಾತ್‌ನ ಮಂತ್ರಿಗಳು ವಿಮಲ್‌ಷಾ ಮತ್ತು ವಾಸ್ತುಪಾಲರ (11 ಮತ್ತು 13 ನೆಯ ಶತಮಾನ) ಮೂರ್ತಿಗಳಿವೆ. ಎಲ್ಲೋರಾ ಗುಹೆಗಳಲ್ಲಿ ಪಾರಮಾರ ದೊರೆಗಳ ಉಬ್ಬುಶಿಲ್ಪಗಳಿವೆ. ಕೋನಾರಕ್‌ನಲ್ಲಿ ಗಂಗರ (ಕ್ರಿ.ಶ. 1278-1305) IIನೆಯ ನರಸಿಂಹನ ಪ್ರಾತಿನಿಧಿಕ ರೂಪವಿದೆ. ಬೇಲೂರಿನಲ್ಲಿ ಹೊಯ್ಸಳ ಚಕ್ರವರ್ತಿ ವಿಷ್ಣುವರ್ಧನನ ರೂಪವನ್ನು ಗುರುತಿಸಬಹುದಾಗಿದೆ. ಅಲ್ಲಿನ ಹಲವು ಸ್ತ್ರೀ



ಚಿತ್ರ-67 : ಕೆ. ಚಂದ್ರನಾಥ ಆಚಾರ್ಯರಿಂದ ಮೂಡಿಬಂದಿರುವ ಒಂದು ಮುಖ. ಮಾಧ್ಯಮ : ತೈಲವರ್ಣ.

ರೂಪಗಳು ರಾಣಿಯರ, ಆಸ್ಥಾನದ ಹೆಂಗೆಳೆಯರ ಶಿಲ್ಪಗಳೇ ಆಗಿವೆ. ವಿಷ್ಣುವರ್ಧನನ ರಾಣಿ ಶಾಂತಲೆಯನ್ನು ನೃತ್ಯದೊಂದಿಗೆ ವೈಭವೀಕರಿಸಿರುವ ಶಿಲ್ಪವೊಂದರಲ್ಲಿ ಗುರುತಿಸಬಹುದಾಗಿದೆ.

ವಂದಿಸುತ್ತಿರುವ ರಾಜ ರಾಣಿಯರ ಶಿಲ್ಪಗಳು, ದೇವಾಲಯ ನರ್ತಕಿಯರ ಶಿಲ್ಪಗಳನ್ನು ಕಂಚು ಮತ್ತು ಶಿಲೆಗಳಲ್ಲಿ ಶಿಲ್ಪಿಸಲಾಗಿದೆ.

ವಿಜಯನಗರದ ಕೃಷ್ಣದೇವರಾಯನು ಇಬ್ಬರು ರಾಣಿಯರೊಂದಿಗೆ ವಂದಿಸುತ್ತಿರುವ ತಿರುಪತಿಯ ವೆಂಕಟರಮಣ ದೇವಾಲಯದಲ್ಲಿರುವ ಭಾವಶಿಲ್ಪಗಳು ಆಕರ್ಷಕ. ಶೈವ ಮತ್ತು ವೈಷ್ಣವ ಸಂತರ ಭಾವ ಚಿತ್ರಗಳೂ ಮೂಡಿಬಂದಿವೆ. 7 ಮತ್ತು 11ನೆಯ ಶತಮಾನಗಳ ನಂತರದಲ್ಲಿ ವೀರರ ಮತ್ತು ಮಹಾ ಸತಿಯರ ವ್ಯಕ್ತಿತ್ವಗಳಿಗೆ ಗೌರವ ಸೂಚಕವಾಗಿ ವೀರಗಲ್ಲು, ಹಾಗೂ ಮಾಸ್ತಿಗಲ್ಲುಗಳು ದೊಡ್ಡರೀತಿಯಲ್ಲಿ ಕಾಣಿಸಿಕೊಂಡವು. ಮುಸ್ಲಿಂ ಆಳ್ವಿಕೆಯ ಅಡಿ ಹಿಂದೂ ರಾಜಕುಮಾರರು ಮತ್ತು ಗಣ್ಯವ್ಯಕ್ತಿಗಳಿಗೆ ಸತ್ತ ನಂತರ ಸ್ಮಾರಕ ಸ್ತಂಭಗಳನ್ನು (ಗೋರಿಕಲ್ಲು) ಸ್ಥಾಪಿಸುವ ಪರಿಪಾಠ ಮುಂದುವರೆಯಿತು. 17ನೆಯ ಶತಮಾನದ ನಂತರ ಈ ಸ್ಮಾರಕ ಸ್ತಂಭಗಳಲ್ಲಿ ರಜಪೂತ ಚಿತ್ರಕಲೆ ನೆನಪಿಸುವ ಉಬ್ಬುಶಿಲ್ಪಗಳನ್ನು ಅಲಂಕರಿಸಲಾಯಿತು. ರಾಜಸ್ಥಾನದಲ್ಲೆಲ್ಲಾ ಇಂತಹವು ಕಂಡು ಬರುತ್ತವೆ. ಮಧ್ಯಭಾರತದಲ್ಲಿ,



ಚಿತ್ರ-68 : 'Head, Diptych - 4', - ಕೆ.ಎಸ್. ರಂಗನಾಥ್,
ಮಾಧ್ಯಮ : ಛಾಯಾಚಿತ್ರ, 1998.



ಚಿತ್ರ-69 : ಒಂದು ಅಭಿವ್ಯಕ್ತಿ,
ಬಾಬುರಾವ್. ಹೆಚ್,
ಮಾಧ್ಯಮ : ಫೋಟೋ ಎಚ್ಚಿಂಗ್,
2000.



*ಚಿತ್ರ-70 : ಬೆಂಗಳೂರಿನಲ್ಲಿ ನಡೆದ ಕೇಂದ್ರ ಲಲಿತ ಕಲಾ ಅಕಾಡೆಮಿಯ ಕಲಾ ಮೇಳದ ಕಲಾಶಿಬಿರವೊಂದರಲ್ಲಿ ಮೂಡಿ ಬಂದ ಭಾವಚಿತ್ರ.*

ಮಧ್ಯ ಪ್ರದೇಶದಲ್ಲಿಯೂ ಈ ಸಂಪ್ರದಾಯ ಮುಂದುವರೆದಿದೆ. ಬಸ್ತಾರ್ ಜಿಲ್ಲೆಯ ಜಗದಲಪುರ, ನಾರಾಯಣಪುರ, ಕೊಂಡಗಾವ್ ಪ್ರದೇಶಗಳಲ್ಲಿ ಇಂದಿಗೂ ಗೋರಿಕಲ್ಲುಗಳ ಮೇಲೆ ಸತ್ತ ವ್ಯಕ್ತಿಯ ಬದುಕನ್ನು ಕುರಿತ ಚಿತ್ರರೂಪದ ಕಥಾನಕವಿರುತ್ತದೆ. ಇಲ್ಲಿ ಅವನ ಭಾ ಚಿತ್ರವೂ ಆ ಗ್ರಾಮದ ಕಲಾವಿದ ಕಂಡಂ ಅವನ ಕುಂಚದಿಂದ ಮೂಡಿ ಬರುತ್ತದೆ.

ಜೋಧ್‌ಪುರದ ರಾ ಅಜಿತ್‌ಸಿಂಗ್ (ಕ್ರಿ.ಶ. 1686-1724 ಮಂಡೂರ್‌ನಲ್ಲಿ ಸಾಂಪ್ರದಾಯಿಕವಾದ ಶೈಲಿಯಲ್ಲಿ ಮೂಡಿ ಬಂದ ನಾಯಕ ಗ್ಯಾಲರಿಯನ್ನು ಕಲ್ಪಿಸಿದನು. ಮೊಗಲ್ ಚಕ್ರವರ್ತಿ ಅಕ್ಬರನು 1568 ರಲ್ಲಿ ರಜಪೂತ ಪತ್ತಾ ಮತ್ತು ಜೈಮಲ್‌ರವರುಗಳ ರಜಪೂತ ಸಂಪ್ರದಾಯ ಶೈಲಿಯ ಶಿಲ್ಪಗಳನ್ನು ಮಾಡಿಸಿದನು 17 ರಿಂದ 19ನೆಯ ಶತಮಾನಗಳಲ್ಲಿ ಗ್ವಾಲಿಯಾರ್, ಬರೋಡಾ, ಕೊಲ್ಹಾಪುರಗಳ ಅರಸು ಮನೆತನದವರ ಸ್ಮಾರಕ ದೇವಾಲಯಗಳಲ್ಲಿ ಇಹಲೋಕ ತ್ಯಜಿಸಿದ ರಾಜಕುಮಾರರ 'ಭಾವಚಿತ್ರಗೊಂಬೆ' ಗಳನ್ನು ಅಲ್ಲಿನ ಶಿವಲಿಂಗದ ಹಿಂದೆ ಕೂರಿಸುತ್ತಿದ್ದರು. ಘುಝ್ನಿಯ ಅರಮನೆಗಳಲ್ಲಿ ಆ ಹಿಂದೆಯೇ ಮುಸ್ಲಿಂ ಭಾವಚಿತ್ರ ಪ್ರಕಾರ ಬೆಳೆದು ಬಂದಿತ್ತು. ನಾಶಗೊಂಡ ಉಬ್ಬು ಶಿಲ್ಪ, ಭಿತ್ತಿಚಿತ್ರಗಳಲ್ಲಿ ಹಲವಾರು ಭಾವಚಿತ್ರಗಳೂ ಇದ್ದವೆಂದು ಹೇಳಾಗಿದೆ. 3ನೆಯ ಫಿರೋಝ್ ಷಾ ತೊಗಲಕ್ (ಕ್ರಿ.ಶ 1357-88) ದೆಹಲಿಯ ಅರಮನೆಗಳಲ್ಲಿ

ವಿವೇಚನೆಯಿಲ್ಲದೆ ಆವೇಶದಲ್ಲಿ ಹಲವಾರು ಭಾವ ಚಿತ್ರಗಳನ್ನು ನಾಶಪಡಿಸಿದ ದಾಖಲೆಗಳಿವೆ. ಗುಜರಾತಿನ ಸುಲ್ತಾನರ ಇಂತಹದೇ ಭಾವ ಚಿತ್ರಗಳಿಂದ ಸ್ಫೂರ್ತಿಗೊಂಡು ಜೈನ 'ಕಾಲಕಾಚಾರ್ಯ ಕಥಾ' ಹಸ್ತಪ್ರತಿಯಲ್ಲಿರುವ ಭಾವಚಿತ್ರಗಳು ರೂಪುಗೊಂಡಿವೆ. ಬಹು ಹಿಂದೆಯೇ ಚಿತ್ರಿಸಲ್ಪಟ್ಟು ಈಗಲೂ ಲಂಡನ್ನಿನ ಇಂಡಿಯಾ ಆಫೀಸ್ ಲೈಬ್ರರಿಯಲ್ಲಿನ 'ನಿಮ್ಮತ್- ನಾಮಾ' (ಕ್ರಿ.ಶ. 1469-1500) ದಲ್ಲಿ ಭಾರತೀಯ ಸುಲ್ತಾನರಾದ ಮಾಳ್ವಾದ ಘಿಯಾಸುದ್ದೀನ್ ಮತ್ತು ಬಂಗಾಳದ ಫಿರೋಝ್ ಷಾ ಭಾವಚಿತ್ರಗಳಿವೆ. ಇವರ ಸಮಕಾಲೀನರುಗಳಾದ ಬಿಜಾಪುರ ಮತ್ತು ಗೋಲ್ಕೊಂಡಗಳ ಮೊದಲ ಸುಲ್ತಾನರುಗಳ ಭಾವಚಿತ್ರಗಳ ನಕಲುಗಳೂ ಇಲ್ಲಿವೆ.



*ಚಿತ್ರ-71 : ಭಾವಶಿಲ್ಪ ಶಿಬಿರವೊಂದರಲ್ಲಿ.......*
*(ಚಿತ್ರಕೃಪೆ : ಆರ್.ರಾಜ)*

ಭಾರತೀಯ ಭಾವಚಿತ್ರಕಲೆ ತನ್ನ ಅತ್ಯುನ್ನತ ಮಟ್ಟವನ್ನು 16ನೆಯ ಶತಮಾನದ ಅಂತ್ಯದಲ್ಲಿ, ವಿಶೇಷವಾಗಿ 17ನೆಯ ಶತಮಾನದಲ್ಲಿ ಮೊಗಲ್ ಚಕ್ರವರ್ತಿಗಳು ಅಕ್ಬರ್ ಜಹಾಂಗೀರ್ ಮತ್ತು ಶಾಹಜಹಾನ್, ಬಿಜಾಪುರದ ಎರಡನೆಯ ಇಬ್ರಾಹಿಂ ಮತ್ತು ಮೊಹಮ್ಮದ್ ಆದಿಲ್ ಷಾ ಹಾಗೂ ಅಬ್ದುಲ್ಲಾ, ಅಬುಲ್-ಹಾಸನ್‌ಕುತುಬ್‌ಷಾಗಳ ಕಾಲದಲ್ಲಿ ಮುಟ್ಟಿತು.

ಪ್ರಾರಂಭದ ಭಾರತ-ಮುಸ್ಲಿಂ ಭಾವ ಚಿತ್ರಗಳು ಪೂರ್ಣಮುಖ ಅಥವಾ ಹಾಗೆ ಭಾವಿಸುವಂತಿರುತ್ತಿದ್ದವು. ಆದರೆ 17ನೆಯ ಶತಮಾನದಿಂದೀಚೆಗೆ. ಪಾರ್ಶ್ವದೃಶ್ಯ (Profile)




ಚಿತ್ರ-72 : ಚಿತ್ರನಟ ಷಾರುಕ್ ಖಾನ್, 2004.

ಭಾವಚಿತ್ರಗಳು ಸಾಮಾನ್ಯವಾದವು. ಬ್ರಿಟೀಷ್ ಮ್ಯೂಸಿಯಂನಲ್ಲಿ ಈ ಸಂದರ್ಭದ ವಿಶಿಷ್ಟ ಭಾವಚಿತ್ರ ರೇಖಣೆಗಳೂ ಸಂಗ್ರಹಿಸಲ್ಪಟ್ಟಿವೆ. ಯೂರೋಪಿಯನ್ ವರ್ಣಚಿತ್ರಗಳಿಂದ ಸ್ಫೂರ್ತಿಗೊಂಡು ಕುದುರೆಯ ಸವಾರಿ ಮಾಡುತ್ತಿರುವಂತೆ ಭಾವಚಿತ್ರಗಳು ಮೂಡಿಬಂದವು!

ಬಹಮನಿ ಸುಲ್ತಾನರ ಅಧೀನದಲ್ಲಿದ್ದ ದಖನ್ನಿನಲ್ಲಿ ಅಲ್ಪಕಾಲ ಆಳಿದ ದೆಹಲಿಯ ಸುಲ್ತಾನರ ಆಳ್ವಿಕೆಯ ನಂತರ ಬೃಹತ್ ಸಾಮ್ರಾಜ್ಯ ಸ್ಥಾಪಿಸಿದ ವಿಜಯನಗರದ ಅರಸರ ಚಿತ್ರ, ಶಿಲ್ಪಗಳಲ್ಲಿ ಆ ಸಂದರ್ಭದ ಜನರ ಬದುಕು ಭಾವಚಿತ್ರಗಳು ಮೂಡಿಬಂದವು. ದೇವತೆಗಳ ರೂಪಗಳ ವೈಭವೀಕರಣದ ನಡುವೆ ಅವರ ಅರಮನೆಗಳಲ್ಲಿ ಭಾವಚಿತ್ರಗಳು ತೂಗುಹಾಕಲ್ಪಟ್ಟಿದ್ದವು..

ಮುಸ್ಲಿಂ ಹಾಗೂ ಹಿಂದು ಸನ್ಯಾಸಿಗಳ ಭಾವಚಿತ್ರಣ 17ನೆಯ ಶತಮಾನದಲ್ಲಿ ಪ್ರಾರಂಭವಾಗಿದೆ. ಹಂಪೆಯ ವಿರೂಪಾಕ್ಷ ದೇವಾಲಯದ ವಿದ್ಯಾರಣ್ಯರ ಭಾವಚಿತ್ರ ಕಲ್ಪನೆ ಐತಿಹಾಸಕ ಮಹತ್ವ ಹೊಂದಿದೆ. ಅದೇ ಸಂದರ್ಭದ ದಕ್ಷಿಣ ಭಾರತದ ಹಲವು ದೇವಾಲಯಗಳ ಭಿತ್ತಿಚಿತ್ರಗಳಲ್ಲೂ ಸಮಕಾಲೀನ ಭಾವಚಿತ್ರಗಳು ಮೂಡಿಬಂದಿವೆ. ತಂಜಾವೂರಿನ ಬೃಹದೇಶ್ವರ ದೇವಾಲಯದ ಆವರಣದಲ್ಲಿ ಮರಾಠ ಆಳ್ವಿಕೆಯ ಸಂದರ್ಭದಲ್ಲಿ ಮೂಡಿ ಬಂದಿರುವ ಅರಸರ ಬೃಹತ್ ಭಾವ ಚಿತ್ರಗಳು ಗಣನೀಯ.

ದಖನ್ನಿನಲ್ಲಿ ಮಧ್ಯಯುಗದ ಸುಲ್ತಾನರ ಕಾಲದ ಚಿಕಣಿ ಚಿತ್ರಕಲೆಯ ಪ್ರಾರಂಭ

ಹಂತವನ್ನು ದಖನ್ನಿನ ಉತ್ತರ ಭಾಗದ ಮೂಂಡುವಿನಲ್ಲಿ ಮೂಡಿಬಂದಿರುವ ಅಲ್ಲಿನ ಖಿಲ್ಜಿ ಸುಲ್ತಾನರ ಕಾಲದ 'ನಿ-ಮತ್-ನಾಮಾ' ಕೃತಿಯಲ್ಲಿನ ಕಿರುರೂಪ ಚಿತ್ರಗಳಲ್ಲಿ ಕಾಣಬಹುದು. ಆ ಕೃತಿಯಲ್ಲಿ ಅರಮನೆಯಲ್ಲಿನ ಹಲವು ಮಹಿಳೆಯರ ಭಾವಚಿತ್ರ ರೂಪಗಳಿವೆ. ಪರ್ಷಿಯಾ-ದಖನ್ನಿ ಶೈಲಿಗಳ ಚಿತ್ರಗಳವು.

ಬೀದರ್ ಬಹಮನಿ ಸಾಮ್ರಾಜ್ಯದ ರಾಜಧಾನಿಯಾಗಿದ್ದಿತು. ಸ್ವಲ್ಪಕಾಲದನಂತರ ಗುಲ್ಬರ್ಗಾ ರಾಜಧಾನಿಯಾಯಿತು. ಮಹಮ್ಮದ್ ಬಿನ್ ತೊಗಲಕ್ ತನ್ನ ರಾಜಧಾನಿಯನ್ನು ದೆಹಲಿಯಿಂದ ದೇವಗಿರಿಗೆ ವರ್ಗಾಯಿಸುವ ಪ್ರಯತ್ನ ಮಾಡಿದಾಗ, ದೆಹಲಿಯಿಂದ ಕಲಾವಿದರು, ಸಾಹಿತಿಗಳು, 'ವರ್ಗಾವಣೆ ವಿಫಲವಾದಾಗ', ದೆಹಲಿಗೆ ಹಿಂತಿರುಗದೆ ಇಲ್ಲಿಯೆ ನೆಲೆಸಿದರು. ಸ್ಥಳೀಯ ಸಂಪ್ರದಾಯದ ಚಿತ್ರಕಲೆಯ ಲಕ್ಷಣಗಳೊಂದಿಗೆ ಪ್ರಾರಂಭಗೊಂಡ ಬಿಜಾಪುರ ಚಿತ್ರಕಲೆ 2ನೆಯ ಇಬ್ರಾಹಿಂ ಆದಿಲ್ ಶಾಹ್ (ಕ್ರಿ.ಶ. 1580-1627) ಕಾಲದಲ್ಲಿ ತನ್ನದೇ ಆದ ಸ್ವಂತಿಕೆಯನ್ನು ಸಾಧಿಸಿತು. ಇವನ ನಂತರ ಮೊಘಲರು ದಖನ್ನಿನಲ್ಲಿ ರಾಜಕೀಯವಾಗಿ ಪ್ರಬಲರಾದಾಗ ಬಿಜಾಪುರ ಚಿತ್ರಕಲೆಯಲ್ಲಿ ಮೊಘಲರ ಚಿತ್ರಕಲೆಯ ಪ್ರಭಾವವೂ ಕಾಣಿಸಿಕೊಳ್ಳತೊಡಗಿತು.

*ಚಿತ್ರ-73 : ಭುವನ ಸುಂದರಿ, ಚಿತ್ರನಟಿ ಐಶ್ವರ್ಯಾರಾಯ್, 2004.*



ಕ್ರಿ.ಶ. 1570-71 ರ 'ನುಜಮ್-ಅಲ್-ಉಲಮ್' ಜ್ಯೋತಿಷ್ಯ ಮತ್ತು ಮಾಂತ್ರಿಕತೆಯ ವಿಜ್ಞಾನದ ಕುರಿತ ಈ ಕೃತಿಯಲ್ಲಿ 876 ಚಿತ್ರಗಳಿವೆ. ದಖನ್ನಿನ ಬಿಜಾಪುರ ಭಾವಚಿತ್ರಕಲೆಯ ಪ್ರಾರಂಭದ ಚಿತ್ರಗಳಂತೆ ಇಲ್ಲಿನ ಮಾನವರೂಪಗಳಿವೆ. ಆ ರೂಪಗಳು ಈ ಮೊದಲೇ ನೆನಪಿಸಿರುವಂತೆ ಪಾರ್ಶ್ವಮುಖವಾಗಿ (Profile) ಚಿತ್ರಿಸಲ್ಪಟ್ಟಿವೆ. ಬಿಜಾಪುರದ ಅಲಿ ಆದಿಲ್ ಷಾಹನ ಕಾಲಕ್ಕೆ ಸೇರಿದ 'ಸಂಗೀತ ರತ್ನಾಕರ' ದ ಮರಾಠಿ ಭಾಷೆಯ ವಿವರಣೆಯ ಪುಸ್ತಕದಲ್ಲಿ ನೃತ್ಯದ ಚಿತ್ರಗಳಲ್ಲಿ ಸುಲ್ತಾನನ ಭಾವಚಿತ್ರಗಳು ಗಮನಿಸುವಂತಿವೆ.




*ಚಿತ್ರ-74 : ಒಂದು ಪ್ರಚಾರ ಫಲಕ, ಏಪ್ರಿಲ್ 2004.*

ಈ ಮೊದಲೇ ಹೇಳಿರುವ ಎರಡನೆಯ ಇಬ್ರಾಹಿಂನ ಕಾಲಕ್ಕೆ ಭಾವಚಿತ್ರಗಳಲ್ಲಿ ಆ ಮೊದಲಿನಂತೆ ಪಾರ್ಶ್ವಮುಖದಲ್ಲಿ ಚಿತ್ರಿಸುವುದನ್ನು ಬಿಟ್ಟು ನೇರವಾಗಿ ಇಲ್ಲವೇ ಮುಕ್ಕಾಲುಭಾಗ ಮುಖ ಕಾಣುವ ಹಾಗೆ ಭಾವಚಿತ್ರಗಳನ್ನು ಬಿಂಬಿಸಲಾಗಿದೆ. ಬಿಜಾಪುರದ ಆಲಿ ಅದಿಲ್‌ನ ಪತ್ನಿ ಚಾಂದ್ ಬೀಬಿಯ ಭಾವಚಿತ್ರವನ್ನು ಹಾಗೂ ಮಹಮ್ಮದ್ ಆದಿಲ್ ಶಾಹನ್ ಭಾವಚಿತ್ರಗಳನ್ನು ಇಲ್ಲಿ ಉದಾಹರಿಸಬಹುದು; ನೈಜತೆಯೂ ಈ ಭಾವಚಿತ್ರಗಳಲ್ಲಿ ಸಾಧಿಸಲ್ಪಟ್ಟಿರುವ ಉಲ್ಲೇಖಗಳಿವೆ. ಸುಲ್ತಾನ ಇಬ್ರಾಹಿಂ ನನ್ನು ಚಿತ್ರಿಸುವಾಗ ಕಲಾವಿದರು ವಿಶೇಷ ಎಚ್ಚರ, ಆಸಕ್ತಿಗಳನ್ನು ವಹಿಸಿರುವುದು ಸಹಜವಾಗಿಯೇ ಇದೆ. ಪ್ರಾರಂಭದ ಭಾವಚಿತ್ರಗಳಲ್ಲಿ

ಚಿತ್ರ-75 :
ಒಂದು ಪ್ರಚಾರ ಪತ್ರ 2004.




ನವಯುವಕನಂತೆ, ನಂತರದ ಭಾವಚಿತ್ರಗಳಲ್ಲಿ ಗಡ್ಡಧಾರಿಯಾಗಿ ಬಿಂಬಿಸಲಾಗಿದೆ. ಕ್ರಿ.ಶ. 1530 ರಲ್ಲಿ ಮೂಡಿಬಂದಿರುವ ಇಬ್ರಾಹಿಂನ ಭಾವಚಿತ್ರ ಬಾಲಕ ಇಬ್ರಾಹಿಂನ ಮುಖದ ಕೋಮಲತೆ, ಮುಗ್ಧತೆಗಳನ್ನು ಹೊಂದಿದೆ. ಸುಲ್ತಾನ ಇಬ್ರಾಹಿಂ ತನ್ನ ಸಂಗಡಿಗರೊಂದಿಗೆ ಮೆರವಣಿಗೆಯಲ್ಲಿ ಮುನ್ನಡೆಯುತ್ತಿರುವ ಚಿತ್ರದಲ್ಲಿ ಅವನ ವ್ಯಕ್ತಿತ್ವವನ್ನು ಉತ್ತಮವಾಗಿ ಗ್ರಹಿಸಲಾಗಿದೆ. 'ಅತಿಥಿಯೊಬ್ಬರನ್ನು ಎದುರುಗೊಳ್ಳುತ್ತಿರುವ ಸೂಫಿ' ಕೃತಿಯಲ್ಲಿ ಸೂಫಿಸಂತ, ಇಬ್ರಾಹಿಂ ಮತ್ತು ಮೂವರ ಗುಂಪು ಭಾವಚಿತ್ರಣವಿದೆ. ಮುಖ ಭಾವಗಳ ಚಿತ್ರಣದಲ್ಲಿ ವೈವಿಧ್ಯತೆ ಇಲ್ಲ. ಬಹುತೇಕ ಎಲ್ಲವೂ ಒಬ್ಬನೇ ವ್ಯಕ್ತಿಯ ಚಿತ್ರಗಳಂತೆ ಕಾಣುತ್ತವೆ. ಯೂರೋಪಿನ ಕಲಾವಿದ ಡಲ್ಬಿಯನ್ ಚಿತ್ರಿಸಿದ ಚಿತ್ರವಿದು. ಈ ಚಿತ್ರದಲ್ಲಿ ಇಬ್ರಾಹಿಂನ ಮುಖ ಲಕ್ಷಣ ಅವನ ಗಿಳಿ ಮೂಗಿನಿಂದ ಗುರುತಿಸುವಂತಾಗಿದೆ. 'Stout Courtier' ಡಲ್ಬಿಯನ್‌ನ ಮತ್ತೊಂದು ಕೃತಿ, ಸರದಾರನೊಬ್ಬ ನಿಂತ ಭಂಗಿಯ ಭಾವ ಚಿತ್ರವಿದು. ಕ್ರಿ.ಶ. 1590ರಲ್ಲಿ ಮೂಡಿಬಂದಿರುವ 'ಗಿಡುಗನೊಂದಿಗೆ 2ನೆಯ ಇಬ್ರಾಹಿಂ' ಕೃತಿಯಲ್ಲಿ ಅರಣ್ಯದಲ್ಲಿ ಕುದುರೆ ಸವಾರಿ ಮಾಡುತ್ತಿರುವ ದೃಶ್ಯಕಲ್ಪನೆಯಿದೆ. ಭೂದೃಶ್ಯದೊಂದಿಗೆ ಭಾವಚಿತ್ರದ ಸಮೀಕರಣ. ಮೊಘಲರ ಆಸ್ಥಾನ ಕವಿ ಚಿತ್ರಿಸಿರುವ ಕೃತಿಯೊಂದರಲ್ಲಿ ಸುಲ್ತಾನ್ ಇಬ್ರಾಹಿಂ ಉದ್ಯಾನವನದಲ್ಲಿ ತಂಬೂರಿಯನ್ನು ನುಡಿಸುತ್ತಿರುವ ಭಂಗಿ ಇದೆ. ಚಿತ್ರದ ಮುಖ್ಯರೂಪವನ್ನು ದೊಡ್ಡಗಾತ್ರದಲ್ಲಿ, ಉಳಿದ ರೂಪಗಳನ್ನು ಚಿಕ್ಕಗಾತ್ರದಲ್ಲಿ ಬಿಂಬಿಸಿರುವುದು ವಿಶೇಷ.



*ಚಿತ್ರ-76 : ಭಾವಚಿತ್ರ : ಕಲಾವಿದರು : ಪೀಟರ್‌ಲೂಯಿಸ್,*
*ಮಾಧ್ಯಮ : ತೈಲವರ್ಣ*

ಬಿಜಾಪುರದಲ್ಲಿ ಇಂದಿಗೂ ಉಳಿದಿರುವ ಆಸರಮಹಲ್ ಮತ್ತು ಕಮತಗಿಯ ಸ್ನಾನಗೃಹದ ಭಿತ್ತಿ, ಮುಚ್ಚಿಗೆಗಳಲ್ಲಿ ಇಬ್ರಾಹಿಂ ಆದಿಲ್ ಶಹಾನ ಸಂದರ್ಭದಲ್ಲಿ ಚಿತ್ರಿತ ಚಿತ್ರಗಳಲ್ಲಿ ವ್ಯಕ್ತಿಚಿತ್ರಗಳು ಹಲವಿವೆ. ಇರಾನಿನ ಚಿತ್ರಕಾರ ಸಿಕ್ರಿಕಚದೊರಿಯಾನ್ ಪ್ರತಿ ಮಾಡಿದ ಕಮತಗಿಯ ಚಿತ್ರವೊಂದು ಮುಂಬಯಿಯ ಇಲ್‌ಸ್ಟ್ರೇಟೆಡ್ ವೀಕ್ಲಿಯಲ್ಲಿ (27-11-1938) ಪ್ರಕಟವಾಗಿತ್ತು. ಸಖಿಯ ಮುಂದೆ ನಿಂತಿರುವ ರಾಜಕುಮಾರಿಯ ಭಾವ ಚಿತ್ರವದು..



*ಚಿತ್ರ-76 : ಭಾವಚಿತ್ರ : ಕಲಾವಿದರು : ಬಾಬುರಾವ್ ನಡೋಣಿ, 2004.*

ಯೂರೋಪಿನ ಚಿತ್ರಶೈಲಿ. ಪೋರ್ಚ್‌ಗೀಸ್ ಪ್ರಜೆಯ ಭಾವಚಿತ್ರ, ಸುಲ್ತಾನ, ಫಕೀರರ ಭಾವಚಿತ್ರಗಳೂ ಮೂಡಿಬಂದವು. ಬಿಜಾಪುರದ ಆಸರಮಹಲಿನ ಮಹಡಿಯ ಕೊಠಡಿಗಳಲ್ಲಿ

ದಖನಿಶೈಲಿಯ ಅಲಂಕಾರಿಕ ಚಿತ್ರಗಳ ನಡುವೆ ಭಾವಚಿತ್ರಗಳೂ ಇವೆ. ಇವು ಈ ಕಟ್ಟಡದ ವಾಸ್ತುಶಿಲ್ಪ ಹಾಗೂ ಭಿತ್ತಿಚಿತ್ರಗಳಿಗೆ ಕಾರಣನಾದ ಮಹಮ್ಮದ್ ಆದಿಲ್ ಶಹಾ ಮತ್ತು ಅವನ ಪ್ರೇಯುಸಿ ರಂಭಾ ಎಂಬುವವಳದ್ದು. ಈ ಮತ್ತು ಉಳಿದ ಭಾವಚಿತ್ರಗಳು ಯೂರೋಪಿನ ವಾಸ್ತವಿಕ ಶೈಲಿಯಲ್ಲಿ ಚಿತ್ರಿತಗೊಂಡಿವೆ. ಇಂದು ಮುಖಗಳನ್ನೆಲ್ಲಾ ಕೆರೆದು ಹಾಳು ಮಾಡಲಾಗಿದೆ.



*ಚಿತ್ರ-79 : ಭಾವಚಿತ್ರ : ಕಲಾವಿದರು : ಡಿ.ಜಿ. ಬಡಿಗೇರ, ಮಾಧ್ಯಮ : ತೈಲವರ್ಣ.*

18ನೆಯ ಶತಮಾನದ ಅಂತ್ಯಕ್ಕೆ ಮೊಗಲ ಭಾವಚಿತ್ರ ಶೈಲಿಯೂ ಯೂರೋಪಿಯನ್ ತೈಲವರ್ಣಚಿತ್ರ ಪ್ರಕಾರಕ್ಕೆ ಬದಲಾಯಿತು. ಮೊದಲ ವಿದೇಶಿ ಭಾವ ಚಿತ್ರಕಲಾವಿದನಾಗಿ ಯಶಸ್ಸುಗಳಿಸಿದವನು ಝೋಫಾಂಗ್, ಔದ್‌ನ ನವಾಬರಾದ ಶುಜಾ-ಉದ್-ದೌಲಾ ಮತ್ತು ಅಸಾಫ್-ಉದ್-ದೌಲಾ ರವರುಗಳಿಗಾಗಿ ಚಿತ್ರಿಸಿದವನು ಇವನೆ. ಜಹಾಂಗೀರ್ ಚಕ್ರವರ್ತಿ ಸಿಂಹವೊಂದನ್ನು ಕೊಲ್ಲುತ್ತಿರುವ ಇಂಟಾಗ್ಲಿಯೋ ತಂತ್ರದ ಪ್ರಿಂಟ್ ಪ್ಯಾರೀಸಿನಲ್ಲಿದೆ. ಶಹಜಹಾನ್‌ನ ಅಮೃತ ಶಿಲೆಯ ಉಬ್ಬು ಭಾವಚಿತ್ರವು ಆಮ್ಸ್‌ಟರ್‌ಡಮ್‌ನಲ್ಲಿದೆ. ಜಹಾಂಗೀರ್‌ನ ಭಾವಚಿತ್ರಗಳೂ ಚಿತ್ರಿಸಲ್ಪಟ್ಟವು.

ವಿಜಯನಗರದ ಪತನದ ನಂತರ ಅಲ್ಲಿನವರು ಹಲವೆಡೆಗೆ ಧಾವಿಸಿದರು. ಸುರಪುರದ

ಚಿತ್ರಶೈಲಿ ಅಲ್ಲಿಂದ ವಲಸೆ ಬಂದಿರುವುದೇ ಆಗಿದೆ. ಸುರಪುರದ ಮುಮ್ಮಡಿ ಪಾಮನಾಯಕ (1752-74) ಚಿತ್ರ-ಶಿಲ್ಪ, ವಾಸ್ತು ಶಿಲ್ಪ ಇತ್ಯಾದಿಗಳ ಬೆಳವಣಿಗೆಗೆ ಹೆಚ್ಚಿನ ಪೋಷಣೆ ನೀಡಿದನು. ಬ್ರಿಟೀಷ್ ಕಂಪನಿ ಸರ್ಕಾರ ಇದೇ ಸಂದರ್ಭದಲ್ಲಿ ಮೆಡೋಸ್ ಟೇಲರ್‌ನನ್ನು ತನ್ನ ರಾಜಕೀಯ ಪ್ರತಿನಿಧಿಯನ್ನಾಗಿ ನೇಮಿಸಿತು. ಸುರಪುರದ ಚಿತ್ರಕಲೆಯು ವಿಜಯನಗರ ಚಿತ್ರಶೈಲಿಯ ಒಂದು ಟಿಸಲು. ಆದರೂ ದಖನಿ, ಮೊಘಲ್, ಮರಾಠ, ನಿಜಾಮ್ ಹಾಗೂ ಕಂಪನಿ ಚಿತ್ರ ಕಲಾಶೈಲಿಗಳ ಮಿಶ್ರಣ. ಮೂಲತಃ ಆಂದ್ರದ ಚಂದ್ರಗಿರಿ, ರತ್ನಗಿರಿಗಳ ಸಂಪರ್ಕ. ಇಂದಿಗೂ ಆಂದ್ರದ ಚಿತ್ತೂರು ಜಿಲ್ಲೆಯ ಚಂದ್ರಗಿರಿಯಲ್ಲಿ ವಿಜಯನಗರದರಸರ ಅರಮನೆಯಿದೆ. ಸುರಪುರದ ಚಿತ್ರಕಲಾವಿದರ ಗುರುಡಾದ್ರಿ ಮನೆತನ ಈ ಮೂಲದಿಂದ ವಲಸೆಬಂದಿದೆ. ನಾಯಕ ಚಿತ್ರ, ಶಿಲ್ಪ, ವಾಸ್ತು ಶಿಲ್ಪಶೈಲಿ ದಕ್ಷಿಣ ಭಾರತದಲ್ಲಿ ತನ್ನದೇ ಆದ ಗುರುತನ್ನು ಸಾಧಿಸಿದೆ, ಸುರಪುರದ ಒಂದನೆಯ ಪಾಮನಾಯಕ, ಒಂದನೆಯ ಪಿಡ್ಡನಾಯಕನ (ಪೆದ್ದನಾಯಕ ಅಥವಾ ದೊಡ್ಡನಾಯಕ) ಭಾವಚಿತ್ರಗಳೇ ಅಲ್ಲದೇ ಮುಮ್ಮಡಿ ಪಾಮನಾಯಕನ (ಕ್ರಿ.ಶ. 1750) ಭಾವಚಿತ್ರಗಳು ದಖನ್ನಿ ಶೈಲಿಯಲ್ಲಿವೆ; ಇವೆಲ್ಲ ಕುಳಿತ ಭಂಗಿಯ ಪಾರ್ಶ್ವಭಾವಚಿತ್ರಗಳು. ಮೊದಲನೆಯ ವೆಂಕಟಪ್ಪನಾಯಕನ ಚಿತ್ರ ಕಂಪನಿ ಶೈಲಿಯಲ್ಲಿದೆ. ನಾಲ್ಕನೆಯ ವೆಂಕಟಪ್ಪ ನಾಯಕನ ಮೂರು ಭಾವಚಿತ್ರಗಳು ದಖನಿ, ಮೊಘಲ್ ಮಿಶ್ರಶೈಲಿಯಲ್ಲಿವೆ.

ಕ್ರಿ.ಶ. 1858ರಲ್ಲಿ ಸುರಪುರ ಸಂಸ್ಥಾನ ಹೈದರಾಬಾದಿನ ನಿಝಾಮನ ಸಂಸ್ಥಾನಕ್ಕೆ ಒಳಪಟ್ಟಿತು. ಕಲಾವಿದರು ಇತರ ಪಟ್ಟಣಗಳ ಶ್ರೀಮಂತರ ಆಶ್ರಯ ಪಡೆದರು. ಕೆಲವು ಕಲಾವಿದರು ಹೈದರಾಬಾದ್, ಗುಲ್ಬರ್ಗಾಗಳಿಗೆ ವಲಸೆ ಬಂದರು. ಶ್ರೀಮಂತರು, ಊರಿನ ಅಧಿಕಾರಿಗಳು, ಗೌಡ, ಪಾಟೀಲ, ದೇಸಾಯಿ, ದೇಶ್‌ಮುಖ್ ಮೊದಲಾದವರು ತಾವೂ ಅರಸರಂತೆ ತಮ್ಮ ಭಾವಚಿತ್ರಗಳನ್ನು ಈ ಕಲಾವಿದರಿಂದ ಬರೆಸಿಕೊಂಡರು. 1900 ರಲ್ಲಿ ಚಿತ್ರಿತಗೊಂಡ ಸುರಪುರದ ಗಣ್ಯವ್ಯಕ್ತಿಗಳ ಚಿತ್ರಣದಲ್ಲಿ ಗುಂಪು ಭಾವಚಿತ್ರ ವೈಭವವಿದೆ. ಎಲ್ಲರ ಮುಖಗಳೂ ಅಂದಿಗೆ ಸಹಜವೆನ್ನಿಸುವ ಹಾಗೆ Profile ಪಾರ್ಶ್ವ ಆಗಿವೆ. ಮುಖಗಳಲ್ಲಿ ಭಾವವೈವಿಧ್ಯವಿದೆ. ಇದೇ ಸಂದರ್ಭದಲ್ಲಿ ರಾಜಾ ರವಿವರ್ಮನ ಪುರಾಣದ ಚಿತ್ರಗಳು,

ಭಾವಚಿತ್ರಗಳು ಇಡೀ ದೇಶದಲ್ಲಿ ಜನಪ್ರಿಯತೆ ಪಡೆದಿದ್ದವು. ಮೆಡೋಸ್ ಟೇಲರ್ ಕಾಲ. ಇಂಗ್ಲೀಷ್ ಆಡಳಿತಾಧಿಕಾರಿಗಳ ಅಗತ್ಯ, ಅಪೇಕ್ಷಗಳ ಕಾರಣ ಕ್ಯಾಮೆರಾ ಸುರಪುರಕ್ಕೆ ಕಾಲಿಟ್ಟಿತು. ಬಣ್ಣಗಳಲ್ಲಿ ವ್ಯಕ್ತಿಯ ಭಾವಚಿತ್ರವನ್ನು ಚಿತ್ರಿಸಿ, ಅವನ ಮುಖವಿರುವ ಸ್ಥಳದಲ್ಲಿ ಛಾಯಾಚಿತ್ರಿತ, ವಾಸ್ತವ ರೀತಿಯ ಮುಖದ ತುಣಕನ್ನು ಕೊಲಾಜ್ ಮಾಡುವ ಪರಿಪಾಠವೂ ಪ್ರಾರಂಭವಾಯಿತು. ಗುಲ್ಬರ್ಗಾ ಜಿಲ್ಲೆಯ ಶಹಾಪುರದ ಹಲ್ಕಟೆಪ್ಪ ಚೌಧುರಿ, ಬಸವರಾಜ್ ದೇಶ್‌ಮುಖ್ ಹಾಗೂ ಸುರಪುರದ ದೀಪಕ್ ಚಂದ್‌ಜೈನ್ ಅವರ ಸಂಗ್ರಹದಲ್ಲಿರುವ ಭಾವಚಿತ್ರಗಳು ಈ ದೃಷ್ಟಿಯಿಂದ ಮುಖ್ಯವೆನಿಸುತ್ತವೆ. ಇದೇ ಸಂದರ್ಭದ ಚಿತ್ರಾಲಂಕೃತ ಹಸ್ತಪ್ರತಿ 'ಬಸವ ಪುರಾಣ' ದ ಚಿತ್ರಗಳಲ್ಲಿ ಹಲವು ಗುಂಪುಭಾವಚಿತ್ರಗಳಿವೆ. ಈ ವ್ಯಕ್ತಿಗಳು ಅಂದಿನ ಸಮಕಾಲೀನರಾಗಿದ್ದಾರೆ. ಮುಖ್ಯವಾಗಿ ಮಠಾಧೀಶರ ಭಾವಚಿತ್ರಗಳೂ ಕಾಣಿಸಿಕೊಂಡಿವೆ.

ನಿಪ್ಪಾಣಿಯ ಅಂಬಾಜಿರಾವ್ ದೇಸಾಯಿಯವರ ವಾಡೆಯೊಂದರಲ್ಲಿ ಸಾಲ್ವಪಕ್ಷಿಯನ್ನು ಹಿಡಿದ ರಾಜ ಕುಮಾರಿಯ ಪಾರ್ಶ್ವಮುಖದ ಭಾವಚಿತ್ರವಿದೆ. ನರಗುಂದದ ಬಾಬಾಸಾಹೇಬರ ಅರಮನೆಯ, ಇಂದಿನ ಪುರಸಭಾ ಕಛೇರಿಯ ಕೋಣೆಯೊಂದರಲ್ಲಿ 18ನೆಯ ಶತಮಾನದ ಭಿತ್ತಿಚಿತ್ರಗಳಿವೆ. 18ನೆಯ ಶತಮಾನದ ಅಂತ್ಯದ ವೇಳೆಗೆ ಆ ಹಿಂದೆ ಅಪರೂಪಕ್ಕೆ ರಾಜ, ರಾಣಿ ಅಥವಾ ಆಳ್ವಿಕೆಗಾರರನ್ನು ಧಾರ್ಮಿಕ ದೃಷ್ಟಿಯ ರೂಪಗಳಿಂದ ಗ್ರಹಿಸಿ, ಆರೋಪಿಸಿ ಚಿತ್ರಿಸುತ್ತಿದ್ದ ಸಂಪ್ರದಾಯ ಪುನರುಜ್ಜೀವನಗೊಂಡಿತು. ಕೃಷ್ಣ, ರಾಧಾ, ಗೋಪಿಕೆಯರು ಸಮಕಾಲೀನ ಗಣ್ಯರ ರೂಪಗಳಲ್ಲಿ ಕಾಣಿಸಿಕೊಂಡರು. ಪುರಾಣ - ಸಮಕಾಲೀನತೆಗಳ ಕಸಿಮಾಡುವ ಪ್ರಕ್ರಿಯೆಯಲ್ಲಿ ರಾಜ ಮತ್ತು ದೇವತೆಗಳನ್ನು ಪರಸ್ಪರ ಆರೋಪಿಸಿರುವ ಭಾವರೂಪಗಳು ವಿಶಿಷ್ಟವಾಗಿ ಮೂಡಿಬಂದಿವೆ. ಶ್ರೀ ಕೃಷ್ಣನ ರೂಪದಲ್ಲಿ ಬಾಬಾಸಾಹೇಬನ ಮುಖಭಾವ ಕಾಣಿಸಿಕೊಂಡಿರುವ ಹಲವು ಚಿತ್ರಗಳಿವೆ. ಮಲಗುವ ಕೋಣೆಯಲ್ಲಿ ಈ ಚಿತ್ರಗಳಿವೆ ಎಂಬುದನ್ನು ಗಮನಿಸಬೇಕು. ಇದೇ ಊರಿನ ಗುಂಡಪ್ಪ ಹಸಬಿಯವರ ಮನೆಯ ಕೃಷ್ಣನ

ಚಿತ್ರವೂ ಇದೇ ದೃಷ್ಟಿಯದು. ದಪ್ಪ ಮೀಸೆಯ ಮುಖ ಮೇಲ್ನೋಟಕ್ಕೆ ಕೃಷ್ಣನಂತಿರುವ ರೂಪದ್ದಾದರೂ, ಕೃಷ್ಣನ ಮುಖ ಅಲ್ಲ! ಮನೆಯ ಒಡೆಯನ ಮುಖವೇ ಅದಿರಬೇಕು. ಹಾಗೆಯೇ ರಾಯಚೂರಿನ್ ಗಾಜನ ಗೌಡರ ಮನೆಯ ಶಯ್ಯಾಗೃಹದ ಭಿತ್ತಿಚಿತ್ರವೊಂದರಲ್ಲಿ ನದಿಯ ನೀರಿನಲ್ಲಿ ಸ್ನಾನಮಾಡುತ್ತಿರುವ ಗೋಪಿಯರನ್ನು ನೋಡುತ್ತಿರುವ ವ್ಯಕ್ತಿ ಮರದಲ್ಲಿ ಕುಳಿತ ಶ್ರೀ ಕೃಷ್ಣನಂತಿದ್ದಾನೆ ಅಷ್ಟೆ. ದೊಡ್ಡಮೀಸೆಯ ಆ ಮನೆಯ ಪ್ರಮುಖ ವ್ಯಕ್ತಿಯ ಭಾವರೂಪ ಕಲ್ಪನೆಯೇ ಇದು.

ರಾಜಕೀಯ ಅಸ್ಥಿರತೆಯ ನಡುವೆಯೂ 17-18ನೆಯ ಶತಮಾನಗಳ ಸಂದರ್ಭದಲ್ಲಿ ಮೈಸೂರು ಅರಸರು ಚಿತ್ರಗಾರರಿಗೆ ಪೋಷಣೆ ನೀಡಿದರು. ಆ ಸಂದರ್ಭದಲ್ಲಿ ಅರಸರ ಹಾಗೂ ಅರಮನೆಯ ಸಂಪರ್ಕದಲ್ಲಿದ್ದ ಹಲವರ ಭಾವಚಿತ್ರಗಳು ಮೂಡಿಬಂದವು. ಅರಸ ಮುಮ್ಮಡಿ ಕೃಷ್ಣರಾಜರು ಸೃಷ್ಟಿಸಿದ ಕಲಾಸಂದರ್ಭದಲ್ಲಿ ಹಲವಾರು ಕಲಾವಿದರು ಕಾಣಿಸಿಕೊಂಡರು. ಇತರ ಪ್ರಕಾರದ ಚಿತ್ರಕಲೆಯ ಜತೆಜತೆಗೇ ಭಾವಚಿತ್ರಕಲಾ ಪ್ರಕಾರವೂ ಬೆಳೆದು ಬಂದಿತು. ಹಲವು ಕಲಾವಿದರ ಜತೆಗೆ ಸುರಪುರದ ಶಂಕರ ಮೈಸೂರಿನಲ್ಲಿದ್ದು ಚಿತ್ರಿಸಿದ ಬಗ್ಗೆ ಉಲ್ಲೇಖಗಳಿವೆ. ಮೈಸೂರು ಅರಮನೆಯಲ್ಲಿಯೇ ಅಲ್ಲದೆ ಶ್ರೀರಂಗ ಪಟ್ಟಣದ ದರಿಯಾದೌಲತ್‌ನಲ್ಲೂ ಭಾವಚಿತ್ರ ಕಲೆಯ ಹೊಳಹುಗಳನ್ನು ಗಮನಿಸಬಹುದು. ರೇಖಾ ಮಾಧ್ಯಮದ ಭಾವಚಿತ್ರಗಳೇ ಅಲ್ಲದೆ ತೈಲವರ್ಣಗಳ ಭಾವಚಿತ್ರಗಳೂ ಅಲ್ಲಿವೆ. ಮರದ ಈ ಅಸಾಮಾನ್ಯ ಸೌಂದರ್ಯದ ವಾಸ್ತು ಶಿಲ್ಪದ ಭಿತ್ತಿ ಹಾಗೂ ಸೂರುಗಳೆಲ್ಲಾ ಚಿತ್ರಗಳಿಂದ ಕೂಡಿವೆ. ಆ ಸಂದರ್ಭದ ಶ್ರೀರಂಗ ಪಟ್ಟಣದ ಅರಮನೆಯ ಸಂಪರ್ಕ, ಸಂಬಂಧ ಹೊಂದಿದ್ದ ಬಹುತೇಕ ವ್ಯಕ್ತಿಚಿತ್ರಗಳು ಭಿತ್ತಿಚಿತ್ರಗಳಲ್ಲಿವೆ. ಸಂಗೀತ ನೃತ್ಯ ಕಲಾವಿದರು ಅರಮನೆಗೆ ಭೇಟಿ ನೀಡಿದ ಅತಿಥಿಗಣ್ಯರು, ರಾಜಕೀಯ ಪ್ರಮುಖರು, ಯುದ್ಧದ ಸಂದರ್ಭದ ದೃಶ್ಯಗಳಲ್ಲಿಯೂ ಹಲವರ ವ್ಯಕ್ತಿಚಿತ್ರಗಳು ಮೂಡಿಬಂದಿವೆ. ಬ್ರಿಟೀಷ್ ಚಿತ್ರಕಲಾವಿದರು 1780, 1792 ಹಾಗೂ 1801 ರ ಸಂದರ್ಭದಲ್ಲಿ ಇಲ್ಲಿದ್ದು ಚಿತ್ರಿಸಿದ್ದಾರೆ. ಯುವರಾಜ ಟಿಪ್ಪುವಿನ ಆಳೆತ್ತರದ

ಭಾವಚಿತ್ರ ತೈಲವರ್ಣದಲ್ಲಿ 1780 ರಲ್ಲಿ ಜಾನ್‌ಜಾಫ್‌ನಿಂದ ಚಿತ್ರಿಸಲ್ಪಟ್ಟಿದೆ. 1792 ಜಿ.ಎಫ್. ಚೆರ್ರಿಯಿಂದ ಟಿಪ್ಪುವಿನ ಎದೆಮಟ್ಟದ ಪಾರ್ಶ್ವ ಮುಖಭಾವದ ಚಿತ್ರ ಮೂಡಿಬಂದಿದೆ. ಟಿಪ್ಪುವಿನ 7 ಮಕ್ಕಳ ರೇಖಾ ಚಿತ್ರ ಮಾಧ್ಯಮದ ಭಾವಚಿತ್ರಗಳೂ ಮೂಡಿಬಂದಿರುವುದೊಂದು ವಿಶೇಷ. ರೇಖೆಗಳಲ್ಲಿ ಭಾವಚಿತ್ರಗಳನ್ನು ಚಿತ್ರಿಸಿ ಅವರ ಹೆಸರುಗಳನ್ನೂ ದಾಖಲಿಸಲಾಗಿದೆ. ಥಾಮಸ್ ಹಿಕ್ಕಿಯಿಂದ ಟಿಪ್ಪುಸುಲ್ತಾನನ ಮೊದಲನೆಯ ಮಗ ಫತೇ ಹೈದರ್, ಎರಡನೆಯ ಮಗ ಅಬ್ದುಲ್ ಖಾಲಿಬ್, ಹೀಗೆ ಏಳು ಮಕ್ಕಳ ರೇಖಾ ಚಿತ್ರಗಳು ಪೆನ್ಸಿಲ್ ಮಾಧ್ಯಮದಲ್ಲಿ ಚಿತ್ರಿಸಲ್ಪಟ್ಟವು. ಬಹುತೇಕ ಎಲ್ಲವೂ 1801 ರಲ್ಲಿ ಚಿತ್ರಿಸಲ್ಪಟ್ಟಿವೆ. ಶ್ರೀರಂಗ ಪಟ್ಟಣದಲ್ಲಿ ಬಹುತೇಕ ಭಾವಚಿತ್ರಗಳು ಮೂಡಿಬಂದಿದ್ದರೂ ಆರನೆಯ ಮಗನ ಭಾವಚಿತ್ರ ತಮಿಳು ನಾಡಿನ ವೆಲ್ಲೂರಿನಲ್ಲಿ ಚಿತ್ರಿಸಲ್ಪಟ್ಟಿದೆ. 27-1-1801 ರ ದಿನ ಚಿತ್ರಿಸಲ್ಪಟ್ಟಿರುವ ಮೈಜುದ್ದೀನ್‌ನ ಭಾವಚಿತ್ರ ಅದು. ಇವೆಲ್ಲವುಗಳ ಜೊತೆಗೆ ಕಾಲ್ದಳದ ಸೈನಿಕ ಹಾಗೂ ಟಿಪ್ಪುವಿನ ಗೋಪ್ಯ, ನಂಬಿಗೆಯ ನೌಕರ ರಾಜಾಖಾನ್, ಮೂರನೆಯ ಕೃಷ್ಮರಾಜ ಒಡೆಯರ ಸೋದರ ಮಾವ ನಂದಿರಾಜ, ದಿವಾನನಾಗಿದ್ದ ಗುಲಾಂ ಅಲಿಖಾನ್, ಹಿರಿಯ ದ್ವಾರಪಾಲಕ ಫಿರೋಜ್, ವಕೀಲ ಅಲಿರಾಜಾಖಾನ್ (1801 ರಲ್ಲಿ ಈ ಭಾವಚಿತ್ರ ವೆಲ್ಲೂರಿನಲ್ಲಿ ಚಿತ್ರಿಸಲ್ಪಟ್ಟಿದೆ.) ಮೊದಲಾದ ಹಲವರ ಪೆನ್ಸಿಲ್ ಮಾಧ್ಯಮದ ರೇಖಾ ಭಾವಚಿತ್ರಗಳೂ ಚಿತ್ರಿಸಲ್ಪಟ್ಟಿವೆ. ಇಲ್ಲಿ ಮುಖದ ಚಹರೆಗಳನ್ನು ಮುಖ್ಯ ಉದ್ದೇಶವಾಗಿ ಇಟ್ಟುಕೊಂಡಿರುವಂತಿದೆ. 19ನೆಯ ಶತಮಾನದಿಂದೀಚೆಗೆ ಬ್ರಿಟೀಷರ ಆಡಳಿತ ಪ್ರಾರಂಭವಾದ ನಂತರದಲ್ಲಿ ವ್ಯಕ್ತಿ ಭಾವಚಿತ್ರ ಪರಂಪರೆಗೆ ಹೆಚ್ಚಿನ ಒತ್ತು ನೀಡಲಾಯಿತು. ರಾಜಾರವಿವರ್ಮನು ಬರೋಡಾದಲ್ಲಿ ಅರಸು ಮನೆತನದ ಹಲವು ಭಾವಚಿತ್ರಗಳನ್ನೇ ಅಲ್ಲದೆ ಇತರ ಚಿತ್ರಗಳನ್ನು ರಚಿಸಿದ ನಂತರ ನಾಲ್ವಡಿ ಕೃಷ್ಣರಾಜ ಒಡೆಯರ ಆಳ್ವಿಕೆಯ ಅವಧಿಯಲ್ಲಿ ಮೈಸೂರಿನಲ್ಲಿದ್ದನು. ಮೈಸೂರು ಅರಸರ ಭಾವಚಿತ್ರಗಳ ಜತೆ ಜತೆಗೇ ಪ್ರಸ್ತುತ ಜಗನ್ಮೋಹನ ಅರಮನೆಯ ಪ್ರದರ್ಶನಾಲಯದಲ್ಲಿ ಪ್ರದರ್ಶಿಸಲ್ಪಟ್ಟಿರುವ ಆತನ ಹಲವು ಚಿತ್ರಗಳು ಆಗ ಚಿತ್ರಿಸಲ್ಪಟ್ಟವು. ಈ ನಡುವೆ ರವಿವರ್ಮನ ಪ್ರೆಸ್‌ನಿಂದ ರಾಷ್ಟ್ರನಾಯಕರ ಭಾವಚಿತ್ರಗಳೂ ಜನಸಾಮಾನ್ಯರನ್ನು ತಲುಪಿದವು. ಹೀಗೆ ರಾಜಕೀಯ

ಸಾಮಾಜಿಕ ವ್ಯಕ್ತಿತ್ವಗಳೇ ಅಲ್ಲದೆ ಧಾರ್ಮಿಕ ವ್ಯಕ್ತಿಗಳ ಭಾವಚಿತ್ರಗಳೂ ಮೂಡಿ ಬಂದಿವೆ ಪಂಡಿತರ ಹಲವು ಭಾವಚಿತ್ರಗಳಲ್ಲಿ ರಾಮಕೃಷ್ಣಪರಮಹಂಸ, ಶಾರದಾದೇವಿಯರ ಭಾವಚಿತ್ರಗಳೂ ಇವೆ. ಶಾಂತಿನಿಕೇತನದಲ್ಲಿ ಕಲಿತು ಬಂದ ಹಲವರು ವಿಶಿಷ್ಟ ರೀತಿಯಲ್ಲಿ ಭಾವಚಿತ್ರಗಳನ್ನು ಚಿತ್ರಿಸಿದರು. ಕೆ. ವೆಂಕಟಪ್ಪನವರು ಹಲವು ಖ್ಯಾತರ ಭಾವಚಿತ್ರಗಳನ್ನು ರಚಿಸಿದ್ದಾರೆ: ಹೆಚ್ಚಿನ ನೈಜತೆಗೆ ಒತ್ತು ನೀಡಿ ಚಿತ್ರಿಸಿದ್ದಾರೆ. ದಂತದ ಮೇಲೆ ಚಿತ್ರಿಸಿರುವ ಮೈಸೂರು ಅರಸರ ಭಾವಚಿತ್ರ, ಈ ಅಂಶಕ್ಕೆ ಪೂರಕವಾಗಿದೆ. ತಮಗೆ ಹೋಟೆಲ್ ಒಂದರಲ್ಲಿ ಊಟ ಬಡಿಸುತ್ತಿದ್ದ ಮಾಣಿಯೊಬ್ಬನ ಭಾವಶಿಲ್ಪವನ್ನು ಮೂಡಿಸಿದ್ದಾರೆ. ಮೈಸೂರು ಅರಮನೆಯ ಭಿತ್ತಿಚಿತ್ರಗಳಲ್ಲಿ ದಸರೆಯ ಮೆರವಣಿಗೆಯ ಚಿತ್ರಗಳಲ್ಲಿ ಭಾವಚಿತ್ರಕಲ್ಪನೆ ನಮ್ಮ ಹಿರಿಯ ಕಲಾವಿದರಿಂದ ಆಕರ್ಷಕವಾಗಿ ಮೂಡಿಬಂದಿದೆ. 1913ರಲ್ಲಿ ಚಾಮರಾಜೇಂದ್ರ ತಾಂತ್ರಿಕ ಶಾಲೆಯಲ್ಲಿ ಕಲಿತುಹೊರಬಂದ ವೆಂಕಟಪ್ಪ, ಎಂ.ಎ. ಅಜೀಜ್, ಎಂ.ವೀರಪ್ಪ, ವೈ.ನಾಗರಾಜು, ಸುಬ್ರಹ್ಮಣ್ಯರಾಜು, ಎಸ್.ನಂಜುಂಡಸ್ವಾಮಿ, ಎಸ್.ಆರ್. ಅಯ್ಯಂಗಾರ್, ಸುಬ್ಬುಕೃಷ್ಣ, ಬಸವಯ್ಯ ಹಾಗೂ ಮುಂಬಯಿಯಲ್ಲಿ ಕಲಿತು ಬಂದ ಡಿ.ಜಿ. ಬಡಿಗೇರ್, ಎಂ.ವಿ. ಮಿಣಜಿಗಿ, ದಂಡಾವತಿಮಠ, ಹೆಬ್ಬಾರ್, ಎಸ್.ಎನ್.ಸ್ವಾಮಿ, ಎಸ್.ಎಂ. ಪಂಡಿತ್, ಹಾಲಬಾವಿ, ಕೇಶವಯ್ಯ, ಶಾಂತಲಿಂಗಪ್ಪಪಾಟೀಲ್, ವಿ.ಕೆ. ಪಾಟೀಲ್, ಪಾವಂಜೆ, ಶಂಕರ್‌ರಾವ್ ಅಳಂದ್‌ಕರ್, ಎಂ.ಟಿ. ಬೋಪಲೆ, ಖಂಡೇರಾವ್, ಎಂ.ಎ.ಚೆಟ್ಟಿ, ಹಡಪದ್, ವಿಜಯಸಿಂಧೂರ್, ಎಂ.ಬಿ. ಪಾಟೀಲ್, ಪೀಟರ್ ಲೂಯಿಸ್, ಜಿ.ಎಸ್. ಶೆಣೈ, ಗೋಪಾಲ ಪದ್ಮಶಾಲಿ, ಶ್ರೀ ಕಾಂತಶೆಟ್ಟಿ, ಕೆ.ಎಸ್.ರಾವ್‌ರವರುಗಳ ಭಾವಚಿತ್ರಣ ಕುಶಲತೆ ಸುಪರಿಚಿತ. ದಯಾನಂದಶೆಟ್ಟಿ, ಪುರುಷೋತ್ತಮ ಕಾಮತ್, ಬಾಬರಾವ್ ನಡೋಣಿ, ಕೆ.ಎನ್. ರಾಮಚಂದ್ರನ್, ಕೆ.ಜಿ. ಸೋಮಶೇಖರ್, ಕೆ.ವಿ. ಸೋಮಶೇಖರ್, ಕೆ.ಟಿ. ಶಿವಪ್ರಸಾದ್, ಮೊದಲಾದವರು ಕನ್ನಡದ ಭಾವಚಿತ್ರಕಲೆಗೆ ತಮ್ಮದೇ ಆದ ಕೊಡುಗೆ ನೀಡಿದ್ದಾರೆ. ಬ್ರಿಟೀಷ್ ದೃಷ್ಟಿಯ, ವಿಕ್ಟೋರಿಯನ್ ಶೈಲಿಯ ಕಲಾಶಾಲೆಗಳಲ್ಲಿ ಕಲಿತ ಬಹುತೇಕ ಭಾರತೀಯ ಕಲಾವಿದರ ಭಾವಚಿತ್ರಗಳಂತೆಯೇ ನಮ್ಮವರ ಭಾವಚಿತ್ರಣಗಳು ಇರುತ್ತಿದ್ದವಾದರೂ ಕೆಲವರು

ತಮ್ಮದೇ ಆದ ಗುರುತಿನ ಛಾಪನ್ನು ಹೊಂದಿರುತ್ತಿದ್ದರು, ಹೆಬ್ಬಾರ್, ಪಂಡಿತ್, ವಿಜಯಸಿಂಧೂರ್, ಕೆ.ಎನ್. ರಾಮಚಂದ್ರನ್‌ರವರುಗಳನ್ನಿಲ್ಲಿ ಹೆಸರಿಸಬಹುದು.

1961 ರಲ್ಲಿ ಎಸ್.ಎನ್. ಅಳಂದ್‌ಕರ್ ರಾಘವೇಂದ್ರ ಸ್ವಾಮಿಗಳ ಭಾವಚಿತ್ರವನ್ನು ಚಿತ್ರಿಸಿದ್ದಾರೆ. 2003ರಲ್ಲಿ ಯೂಸೂಫ್ ಅರಕ್ಕಲ್ ರಾಷ್ಟ್ರಪತಿಯಾಗಿದ್ದ ಕೆ.ಆರ್. ನಾರಾಯಣನ್‌ರವರ ಭಾವಚಿತ್ರವನ್ನು ನೈಜಶೈಲಿಯಲ್ಲಿ ಚಿತ್ರಿಸಿದ್ದು ಸಮಕಾಲೀನ ಸಂದರ್ಭದಲ್ಲಿ ಗಮನಿಸುವಂತಿದೆ. 1980 ರಲ್ಲಿ ಹಡ್‌ಪದ್‌ರಲ್ಲಿ ಕಲಿತ ಸಾವಿತ್ರಿ ಎಂಬ ಕಲಾವಿದೆ ಸ್ವನಗ್ನ ಭಾವಚಿತ್ರವನ್ನು ಚಿತ್ರಿಸಿ ಮಾಡಿದ ಸುದ್ದಿಯೂ ನೆನಪಾಗುತ್ತಿದೆ.

ಯೂರೋಪಿನಲ್ಲಿ 1675 ರಿಂದ 1850 ರ ವರೆಗೆ ಭಾವಚಿತ್ರಕಲೆಯ ಸುವರ್ಣಯುಗವಿದ್ದಿತು. 1840ರಲ್ಲಿ ಛಾಯಾಚಿತ್ರ ಕಲೆ ಈ ಸ್ಥಾನವನ್ನು ಆಕ್ರಮಿಸಲಾರಂಭಿಸಿತು. 1950 ರಲ್ಲಿ ಆಕ್ರಮಿಸಿಯೇಬಿಟ್ಟಿತು. ಕ್ಯಾಮರಾದ ಆಧಿಪತ್ಯವನ್ನು ಮುರಿಯಲು ಕಲಾವಿದರು ಹಲವು ದಾರಿಗಳನ್ನು ಕಂಡುಕೊಂಡರು. 20ನೆಯ ಶತಮಾನದಲ್ಲಿ ಮಿಶ್ರಮಾಧ್ಯಮದ ಅಭಿವ್ಯಕ್ತಿಯ ನಡುವೆಯೇ ಕೆಲವರು ಛಾಯಾಚಿತ್ರ ಮಾಧ್ಯಮ ಭಾವಚಿತ್ರಗಳನ್ನೂ ದುಡಿಸಿಕೊಂಡದ್ದೂ ಉಂಟು. ಲಂಡನ್ನಿನ ರಾಷ್ಟ್ರೀಯ ಭಾವಚಿತ್ರ ಗ್ಯಾಲರಿಯಲ್ಲಿ ಹಲವು ಮಾಧ್ಯಮದ ಭಾವಚಿತ್ರಗಳ ಸಂಗ್ರಹ ಉಂಟು. ಪಾಲಿ ಬೋರ್ಲ್ಯಾಂಡ್ ಬ್ರಿಟನ್ ಹಾಗೂ ಆಸ್ಟೇಲಿಯದಲ್ಲಿ ಭಾವಚಿತ್ರ ಛಾಯಾಗ್ರಾಹಕಿಯಾಗಿ ಪರಿಚಿತವಾಗಿರುವವರು. ಅವರ 'ಆಸ್ಟ್ರೇಲಿಯನ್ನರು' ಶೀರ್ಷಿಕೆಯ ಭಾವಚಿತ್ರಗಳ ಪ್ರದರ್ಶನ ಲಂಡನ್ನಿನ (200 ಹಾಗೂ ಕ್ಯಾನ್‌ಬೆರ್ರಾ (2001) ರಾಷ್ಟ್ರೀಯ ಭಾವಚಿತ್ರಗ್ಯಾಲರಿಗಳಲ್ಲಿ ನಡೆದಾಗ ಹಲವರಿ ಕೌತುಕ. ಪ್ರಾಯೋಜಿತಗೊಂಡಿದ್ದ ಈ ಭಾವಚಿತ್ರಗಳಲ್ಲಿ ನ್ಯೂಸೌತೇವೇಲ್ಸ್ ಸಂಜಾತ, ನರ್ತ ನೃತ್ಯ ನಿರ್ದೇಶಕ ಲಾಯ್ಡ್‌ನ್ಯೂಸನ್‌ನ ಬೋಳು ತಲೆಯನ್ನು ಸ್ನಾನ ಮಾಡುವ ಸಂದರ್ಭದ

ಹಿಂದಿನಿಂದ ಗ್ರಹಿಸಿರುವ ಭಾವಚಿತ್ರ ತನ್ನ ವಿಶಿಷ್ಟ ಉದ್ದೇಶದಿಂದ ಗಣನೀಯ. ಲಂಡನ್ನಿನ ರಾಷ್ಟ್ರೀಯ ಭಾವಚಿತ್ರ ಗ್ಯಾಲರಿಗೆ 1908ರ ಸೆಪ್ಟಂಬರ್‌ನಲ್ಲಿ ಭೇಟಿ ನೀಡಿದ ಸಿಗ್ಮಂಡ್ ಫ್ರಾಯ್ಡ್ **Faces and Men** ಶೀರ್ಷಿಕೆಯ ಕೆಲವು ಟಿಪ್ಪಣಿಗಳನ್ನು ಮಾಡಿದ್ದಾನೆ. ಅವುಗಳಲ್ಲಿ **"Of course one has to take the painter into consideration. In some pictures easy to see how he spoils a face."** ಎಂಬ ಸಾಲು ಗಮನಾರ್ಹ. ಭಾವಚಿತ್ರಗಳನ್ನು ನೋಡುವಾಗ ಆ ವ್ಯಕ್ತಿಗಳ ತಲೆಗಳ ಆಕಾರಗಳಿಂದ ಅವರ ದೇಶ-ಜನಾಂಗಗಳನ್ನು ತಿಳಿಯುವ ಅಧ್ಯಯನ ಶಾಸ್ತ್ರಗಳಿವೆ. ಕಪಾಲ ಶಾಸ್ತ್ರವನ್ನಿಲ್ಲಿ ಹೆಸರಿಸಬಹುದು. ರಾಷ್ಟ್ರವೊಂದರ ಜನಾಂಗವನ್ನು ಅವಮಾನಿಸುವ ಉದ್ದೇಶಕ್ಕಾಗಿಯೇ ಅಲ್ಲಿನ ಆದಿಮ ಜನಾಂಗದ ತಲೆಬುರುಡೆಗಳನ್ನು ಕುರಿತು ಪಕ್ಷಪಾತೀಯ ಊಹೆಗಳನ್ನು ಮಾಡಬಹುದು. ಭಾವಚಿತ್ರದ ವ್ಯಕ್ತಿಗಳ ವ್ಯಕ್ತಿತ್ವ, ಕಲೆಯ ಅಂಶಗಳು ಮುಖ್ಯವಾಗಿದ್ದರೂ ಬೇರೆಯೇ ಉದ್ದೇಶಗಳ ರಾಜಕಾರಣಕ್ಕಾಗಿಯೂ ಭಾವಚಿತ್ರಗಳನ್ನು ಸಂಗ್ರಹಿಸುವ ಸಾಧ್ಯತೆಗಳಿವೆ; ಇರಲಿ. ಇಂದು ಭಾವಚಿತ್ರ ಕಲೆಯ ಪ್ರಕಾರ ತನ್ನ ವ್ಯಾಪ್ತಿ, ಉದ್ದೇಶಗಳನ್ನು ಹಲವು ದಿಕ್ಕುಗಳಲ್ಲಿ ವಿಸ್ತರಿಸಿ ಕೊಳ್ಳುತ್ತಿದೆ. ವ್ಯಕ್ತಿಭಾವಚಿತ್ರ, ಸ್ವಭಾವಚಿತ್ರ, ಇಬ್ಬರ ಮತ್ತು ಗುಂಪು ಭಾವಚಿತ್ರಗಳ ಪ್ರಕಾರ ಇಂದು ಕಲೆಯ ಉದ್ದೇಶ ಮೀರಿ ಪ್ರಾರಂಭದಲ್ಲಿ ಹೇಳಿರುವ ಮಾಂತ್ರಿಕ ಶಕ್ತಿಯನ್ನು ವಿಶಿಷ್ಟ ರೀತಿಯಲ್ಲಿ ಪಡೆದುಕೊಳ್ಳುತ್ತಿವೆ! ಆ ಮಾಂತ್ರಿಕ ಶಕ್ತಿ ಹಣ.

ಕಲಾವಿದರು ಈ ಹಿಂದಿನಂತೆ ಮತ್ತು ಈಗಲೂ ವ್ಯಕ್ತಿಗಳನ್ನು ಚಿತ್ರಿಸುತ್ತಿದ್ದಾರೆ. ಆದರೆ ಸುತ್ತಲೂ ನಮ್ಮ ಜನರ ಕಣ್ಣು ಕೋರೈಸುವಂತಹ ಬಣ್ಣ, ಬೆಳಕುಗಳ ಜತೆಗೆ ಮನುಷ್ಯರ ರೂಪಗಳು ಎಲ್ಲೆಲ್ಲೂ ಕಾಣುತ್ತಿವೆ. ಹಿಂದೆಲ್ಲಾ ಕಲಾವಿದರಿಂದ ಚಿತ್ರಿಸಲ್ಪಡುತ್ತಿದ್ದ ಸಿನಿಮಾ ಭಿತ್ತಿ ಪತ್ರ, ಹೋರ್ಡಿಂಗ್ (Hoarding) ಗಳು ಇಂದು ಡಿಜಿಟಲ್ ತಂತ್ರ ಜ್ಞಾನದಲ್ಲಿ

ಅಸಾಮಾನ್ಯ ನೈಜತೆಯೊಂದಿಗೆ ಮೂಡಿಬರುತ್ತಿವೆ. ಕಲಾವಿದರಿಂದ ವಿಶೀಷ್ಟವಾಗಿ ಮೂಡಿ ಬರುತ್ತಿದ್ದ ರಾಜಕೀಯ ಹಾಗೂ ಸಿನಿಮಾತಾರೆಯರ ಭಾವಚಿತ್ರಗಳೂ ಇಂದು ದೊಡ್ಡ ರೀತಿಯಲ್ಲಿ ಡಿಜಿಟಲ್ ಇಮೇಜಿಂಗ್ ಮೂಲಕ ಪ್ರಿಂಟ್ ಆಗುತ್ತಿವೆ. ಛಾಯಾಚಿತ್ರ ಮತ್ತು ಪ್ರಿಂಟ್ ಮಾಧ್ಯಮಗಳ ಆಲಿಂಗನ ಸಾಮಾನ್ಯ ಉದ್ದೇಶಗಳಿಗೆ, ಸಾಮಾನ್ಯ ಕಣ್ಣುಗಳಿಗೆ ಖುಷಿ ನೀಡುತ್ತಾಸಾಗಿದೆ. ಚಲನಚಿತ್ರಗಳಲ್ಲಿ ತಮ್ಮದೇ ಆದ ಗುರುತನ್ನು ಛಾಪಿಸಿ, ಜನಪ್ರಿಯರಾದ ನಾಯಕ, ನಾಯಕಿಯರನ್ನು ಅದೇ 'Image' ನಲ್ಲಿ ತೋರಿಸಲು ನಿರ್ದೇಶಕರು ಬಹುತೇಕ ಹೆಣಗುತ್ತಾರೆ. ಅಲ್ಪಸ್ವಲ್ಪ ವೈವಿಧ್ಯತೆ ತರಲು ಪ್ರಯತ್ನಿಸುತ್ತಾರೆ. ಕೆಲವೊಮ್ಮೆ ಅಸಾಮಾನ್ಯ ಸಂದರ್ಭವೊಂದರ ಹಿನ್ನೆಲೆಯಿಂದಾಗಿ ಹೊಸ Image ಸಹ ಆ ನಾಯಕನಿಗೆ ನಿರ್ದೇಶಕನಿಂದದಕ್ಕಬಹುದು. ಎಸ್.ಆರ್. ಪುಟ್ಟಣ್ಣ ಕಣಗಾಲ್, ಮಣಿರತ್ನಂ, ಗಿರೀಶ್ ಕಾಸರವಳ್ಳಿ, ಸುನಿಲ್‌ಕುಮಾರ್ ದೇಸಾಯಿ, ಬರಗೂರು ರಾಮಚಂದ್ರಪ್ಪ, ನಾಗಾಭರಣ, ಕಮಲಹಾಸನ್, ದಿನೇಶ್‌ಬಾಬು ರಂತಹ ನಿರ್ದೇಶಕರು ಈ ಸಾಲಿಗೆ ಸೇರುವವರೇ ಆಗಿದ್ದಾರೆ. ಈ 'ನೋಡುಗರ ನಿರ್ದಿಷ್ಟ, ನಿರೀಕ್ಷಿತ ಅಪೇಕ್ಷೆ' ಪೂರೈಕೆಯ ಹಾವು ಏಣಿಯ ಆಟದಲ್ಲಿ ಕೆಲವೊಮ್ಮೆ ಗೆಲವು, ಕೆಲವೊಮ್ಮೆ ಸೋಲು. ರಾಜಕುಮಾರ್, ಅಮಿತಾಬ್‌ಬಚ್ಚನ್, ರಜನಿಕಾಂತ್, ವಿಷ್ಣುವರ್ಧನ್‌ರವರುಗಳನ್ನು ನೆನಪುಮಾಡಿಕೊಳ್ಳಿ. ಪತ್ರಿಕೆಗಳ ಸಂಪಾದಕರೂ ಈ ನಾಯಕ ನಟರ ಚಿತ್ರಗಳು ಬಿಡುಗಡೆಯಾದಾಗ ವಿಮರ್ಶೆಗಳು ಟೀಕೆ, ಸಲಹೆಗಳಿಂದ ಮುಕ್ತವಾಗಿರಲಿ ಎಂದೇ ನಿರೀಕ್ಷಿಸುವ ಸಂದರ್ಭವೂ ಇದ್ದಿತು. ವಿಮರ್ಶಕರೊಬ್ಬರು ರಾಜಕುಮಾರ್ ಭಾವಚಿತ್ರದ ಮುಖ, ಮೂಗುಗಳನ್ನು ಪ್ರಸ್ತಾಪಿಸಿ ಪಾತ್ರವೊಂದರ ಸಂದರ್ಭದಲ್ಲಿ ವಿಶ್ಲೇಷಿಸಿದಾಗ ಅವರ ಅಭಿಮಾನಿ ವರ್ಗ ಆ ಪತ್ರಿಕೆಯ ವಿರುದ್ಧ ತೀವ್ರವಾಗಿ ಪ್ರತಿಭಟಿಸಿತು. ಚಿತ್ರ ನಟರ ಭಾವಚಿತ್ರಗಳ ಕುರಿತು ಇನ್ನೊಂದು ಅಂಶವನ್ನು ಇಲ್ಲಿ

ಪ್ರಸ್ತಾಪಿಸಿಬಹುದು. ಅದು ಅವರ ನಂಬಿಕೆಯನ್ನು ಅವಲಂಬಿಸಿರುವ ರೀತಿಯಲ್ಲಿನ ದಿಟ್ಟತೆ. ಜನಸಾಮಾನ್ಯರ ದೃಶ್ಯಪ್ರಜ್ಞೆಯನ್ನು ಪ್ರಭಾವಸುತ್ತಿರುವ ಟಿ.ವಿ. ಛಾನೆಲ್‌ಗಳಲ್ಲಿ ಒಂದಾಗಿರುವ ಜೆಮಿನಿ ತೆಲುಗು ಛಾನೆಲ್‌ನಲ್ಲಿ 'ನವ್ವುಲ ನಜರಾನಾ' ಎಂಬ ಕಾರ್ಯಕ್ರಮವೊಂದು ನಿಯಮಿತವಾಗಿ ಮೂಡಿಬರುತ್ತಿದೆ. ಈ ಕಾರ್ಯಕ್ರಮದ ಉದ್ದೇಶ ಹಾಸ್ಯಪ್ರಜ್ಞೆಯನ್ನು ಬಂಬಿಸುವುದು. ಛಾನೆಲ್‌ನ ಸ್ಟುಡಿಯೋದಲ್ಲಿ ಕುಳಿತ ಇಬ್ಬರು ತಮ್ಮ ಹಾಸ್ಯ ಸಂಭಾಷಣೆಯ ನಡು ನಡುವೆ ನಗರ, ಪಟ್ಟಣ, ಹಾಗೂ ಗ್ರಾಮೀಣ ಜನರಲ್ಲಿ 'ಭಾವಚಿತ್ರ ಗುರುತಿಸುವ' ವಿಶಿಷ್ಟ ಪ್ರಜ್ಞೆಯ ಹಲವು ಮುಖಗಳನ್ನು ತೆರೆದಿಡುತ್ತಾರೆ. ಬೀದಿಗಳಲ್ಲಿ ಜನರ ನಡುವೆ ನಡೆದಾಡುತ್ತಾ ಛಾನೆಲ್‌ನ ನಿರ್ವಾಹಕನೊಬ್ಬ ಭಾರತದ ಖ್ಯಾತ ನಟ ನಟಿಯರಲ್ಲೊಬ್ಬರ ಭಾವಚಿತ್ರವನ್ನು ತೋರಿಸಿ ನಿರ್ದಿಷ್ಟ ವ್ಯಕ್ತಿಯನ್ನು 'ಇದು ಯಾರ ಭಾವಚಿತ್ರ?' ಎಂದು ಪ್ರಶ್ನಿಸುತ್ತಾನೆ. ಈ ಪ್ರಶ್ನೆಗೆ ವಿಚಿತ್ರ, ವಿಶಿಷ್ಟ, ಸ್ಪಷ್ಟ, ಕೆಲವೊಮ್ಮೆ ಅಸಂಬದ್ಧ ಉತ್ತರಗಳು ಕೇಳಿಬರುತ್ತವೆ. ಹೇಮಮಾಲಿನಿಯ ಭಾವಚಿತ್ರ ತೋರಿಸಿದಾಗ ಕೆಲವರು ತಮಗಿಷ್ಟವಾದ ಬೇರೆ ನಾಯಕಿ ನಟಿಯ ಹೆಸರು ಹೇಳಿ ಅವಳನ್ನು ಏಕೆ ಇಷ್ಟಪಡುತ್ತೇನೆ? ಇತ್ತೀಚೆಗೆ ಆಕೆಯ ಯಾವ ಚಿತ್ರ ನೋಡಿದೆ, ಎಲ್ಲಿ ಎಂಬುದನ್ನೆಲ್ಲಾ ವಿವರಿಸುತ್ತಾರೆ! ಅಮಿತಾಬ್‌ನನ್ನು ಗುರುತಿಸಿದ ಒಬ್ಬ ಅದು ಚಿರಂಜೀವಿಯದು ಎನ್ನುತಾನೆ! ಮಿಥುನ್‌ಚಕ್ರವರ್ತಿಯ ಭಾವಚಿತ್ರ ನೋಡಿದವನೊಬ್ಬ ಅಮೀರ್‌ಖಾನ್ ಎನ್ನುತ್ತಾನೆ! ಸ್ಟುಡಿಯೋದಲ್ಲಿನ ಲೈವ್ ಕಾರ್ಯಕ್ರಮದ ನಿರ್ವಾಹಕರಿಬ್ಬರೂ ನಗುತ್ತಾರೆ; ನಮ್ಮನ್ನೂ ನಗಿಸುತ್ತಾರೆ. ಜನ ಸಾಮಾನ್ಯರ ಮನಸ್ಸಿನಲ್ಲಿ ನೆಲೆನಿಂತ ಅವರ ನಾಯಕ, ನಾಯಕಿಯರ ಬಗೆಗಿನ ಅಭಿಮಾನ, ಅವರ ನೆನಪಿನ ನಂಬಿಕೆ ಇತ್ಯಾದಿಗಳು ಪ್ರಭಾವಬೀರಿ ಇಲ್ಲಿ ವ್ಯಕ್ತಗೊಳ್ಳುತ್ತವೆ.

ಕರ್ನಾಟಕದ ಎಲ್ಲ ನಗರ ಪಟ್ಟಣಗಳ ರಸ್ತೆ ಬದಿಗಳಲ್ಲಿ ಕಣ್ಸೆಳೆಯುವಂತೆ

ಮಾರಲ್ಪಡುತ್ತಿರುವ ರಜನಿಕಾಂತ್, ಅಮಿತಾಬಾ ಬಚ್ಚನ್, ಅಶ್ವರ್ಯಾರಾಯ್, ವಿಷ್ಣುವರ್ಧನ್, ದರ್ಶನ್‌ರಂಥವರ ಭಾವಚಿತ್ರಗಳು ಹೆಚ್ಚಿನ ಸಂಖ್ಯೆಯ ಜನಸಾಮಾನ್ಯರ ಮನೆಯನ್ನು ಸೇರುತ್ತಿವೆ. ಕ್ಯಾಮರಾ ಮೂಲದ ಪ್ರಿಂಟ್‌ಗಳಿವು. ಈ ಚಿತ್ರಗಳ ಸ್ಥಳದಲ್ಲಿ ಎಸ್.ಎಂ. ಪಂಡಿತ್, ಎಂ.ಎಫ್. ಹುಸೇನ್‌ರಂತಹ ಕಲಾವಿದರು ಬಣ್ಣಗಳಿಂದ ಮೂಡಿಸಿದ ಪ್ರಿಂಟ್‌ಗಳನ್ನು ಊಹಿಸಿಕೊಳ್ಳಿ. ಆ ದಿನಗಳು ಇಂದಿಲ್ಲ. ಭಾವಚಿತ್ರಗಳನ್ನು ತಮ್ಮ ಕೃತಿಗಳ ಆತ್ಮವಾಗಿ ದುಡಿಸಿಕೊಳ್ಳುವ ಯೂಸೂಫ್ ಅರಕ್ಕಲ್, ಡಿಜಿಟಲ್ ತಂತ್ರಜ್ಞಾನವನ್ನು ಮಾಧ್ಯಮವಾಗಿಸಿಕೊಂಡು ಅಭಿವ್ಯಕಿಸಿದ್ದಾರೆ. ಹಲವು ದೃಶಮಾಧ್ಯಮಗಳ ಮೂಲ ರೂಪಗಳನ್ನು ತಮ್ಮ ಕಂಪ್ಯೂಟರಿಗೆ ತುಂಬಿ ಅದರಿಂದ ತಮ್ಮ ಆಶಯಕ್ಕೆ ಅಗತ್ಯವಾದ ರೀತಿಯಲ್ಲಿ ಪಡೆದ 'Conflict's Children' ಶೀರ್ಷಿಕೆಯ ಕೃತಿಮಾಲೆಯಲ್ಲಿ ಕೆಲವು ರೂಪಗಳು ಅಸಾಮಾನ್ಯ ಭಾವಚಿತ್ರಗಳ ಜೀವಂತಿಕೆಯನ್ನು ಹೊಂದಿವೆ. ನಮ್ಮ ಹಲವಾರು ಕಲಾವಿದರು, ಕಲಾವಿದೆಯರು ಭಾವಚಿತ್ರಕಲೆಯ ಹೊಳಹುಗಳನ್ನು ತಮ್ಮ ಅಭಿವ್ಯಕ್ತಿಯ ಅಶಯಗಳಿಗೆ ಪೂರಕವಾಗಿ ಹಲವು ರೀತಿಗಳಲ್ಲಿ ಅರಗಿಸಿಕೊಂಡಿದ್ದಾರೆ. ಭಾವಚಿತ್ರಕಲಾ ಪ್ರಕಾರಕ್ಕೆ ಆಕರ್ಷಣೆ ನೀಡುವಂತೆ ಬೆಂಗಳೂರಿನಲ್ಲಿ ನಡೆದ ಬೆಂಗಳೂರು ಹಬ್ಬ, ಚಿತ್ರ ಸಂತೆಗಳಲ್ಲಿ ಹೆಚ್ಚಿನ ಸಂಖ್ಯೆಯ ಜನರು ತಮ್ಮ ಭಾವ ಚಿತ್ರಗಳನ್ನು ಕಲಾವಿದರಿಂದ ಚಿತ್ರಿಸಿಕೊಂಡರು. 2003ರಲ್ಲಿ ಮೈಸೂರಿನಲ್ಲಿ ಕರ್ನಾಟಕ ಶಿಲ್ಪಕಲಾ ಅಕಾಡೆಮಿ ಭಾವಶಿಲ್ಪ ಶಿಬಿರವನ್ನು ನಡೆಸಿತು. ಕನ್ನಡದ ಜ್ಞಾನಪೀಠ ಪ್ರಶಸ್ತಿ ಪಡೆದ ಸಾಹಿತಿಗಳೇ ಅಲ್ಲದೆ ಬೇಂದ್ರೆ, ಮಾಸ್ತಿ, ಕರ್ನಾಟಕ ರತ್ನ ರಾಜಕುಮಾರ್ ರಂಥ ವ್ಯಕ್ತಿಗಳ ಭಾವಶಿಲ್ಪಗಳೂ ಮೂಡಿಬಂದವು. ಛಾಯಾಚಿತ್ರಗಳನ್ನು ಆಕರವನ್ನಾಗಿಸಿ ಮೂಡಿಬಂದ ಭಾವಶಿಲ್ಪಗಳವು. ಕನಕಾಮೂರ್ತಿ, ವೆಂಕಟಾಚಲಪತಿ, ವಿ.ಎ. ದೇಶಪಾಂಡೆ, ಪ್ರದಾನಿ ನಾಗಪ್ಪ, ಶಿವಕುಮಾರ್, ಜೆ.ಎಸ್. ಜಕ್ಕಪಲ್ಲಿ, ವೀರೇಶ್‌ಮಾಯಾಚಾರ್, ವೀರಣ್ಣ, ಕೆ. ರಾಘುವೇಂದ್ರ ಮೊದಲಾದವರು ಅಕೆಡೆಮಿಕ್ ಹಾದಿಗಳಲ್ಲಿಯೇ ನಡೆದು ಮೂಡಿಸಿದ

ಭಾವಶಿಲ್ಪಗಳವು. ಈಗಾಗಲೇ ನಮ್ಮ ನಡುವೆ ಸಾರ್ವಜನಿಕವಾಗಿ ಪ್ರತಿಷ್ಠಾಪಿಸಿರುವ ಗಾಂಧಿ, ನೆಹರು, ಅಂಬೇಡ್ಕರ್, ಬಸವೇಶ್ವರ, ಕಿತ್ತೂರ ಚನ್ನಮ್ಮ ಹಾಗೂ ಸಾಹಿತ್ಯ ಹಾಗೂ ರಾಜಕೀಯ ರಂಗದ ಹಲವು ದಿಗ್ಗಜರ ಶಿಲ್ಪಗಳು ಇದ್ದೇಇವೆ. ಆದರೆ ಇಂದು ಭಾವಶಿಲ್ಪ- ಭಾವಚಿತ್ರ ಪ್ರಕಾರ ಕಲಾ ಶಾಲೆಗಳಲ್ಲಿ ಮಾತ್ರ ಜೀವಂತವಾಗಿದೆ ಅಷ್ಟೆ. ನಮ್ಮ ಬಹುತೇಕ ಕಲಾವಿದರು ಪ್ರಾತ್ಯಕ್ಷಿಕೆಗಳಲ್ಲಿ ಭಾವಚಿತ್ರಗಳನ್ನು ಚಿತ್ರಿಸುತ್ತಿದ್ದಾರೆ. ತಮ್ಮ ಸ್ವಭಾವ ಚಿತ್ರಗಳನ್ನು ಚಿತ್ರಿಸಿ ಕೊಂಡಿರುವವರೂ ಅಪರೂಪ. ಎದುರಿಗೆ ಕುಳಿತಿರುವ ವ್ಯಕ್ತಿ ಒಂದು ನೆಪ ಅಷ್ಟೆ. Sitter ಮೂಲಕ ಕಲಾವಿದ ತನ್ನನ್ನೇ ಚಿತ್ರಿಸಿಕೊಳ್ಳುತ್ತಾನೆ ಎಂಬ ಅನಿಸಿಕೆಯೂ ಇದೆ. ನಮ್ಮ ಸಂದರ್ಭದ ಎನ್. ಪುಷ್ಪಮಾಲಾ ಇಲ್ಲಿ ನೆನಪಾಗುತ್ತಾರೆ. 'ಸ್ವಯಂ'ನ ಅಭಿವ್ಯಕ್ತಿಯ ಕಾರಣ ಹಾಗೆ ಆಗಬಹುದು. ರೆಂಬ್ರಾಂಟ್, ವ್ಯಾನ್‌ಗಾಗ್, ರೋಡಿನ್, ಫ್ರಾನ್ಸಿಸ್ ಬೇಕನ್[7], ಮೊದಲಾದವರು ಚಿತ್ರಿಸಿದ ಭಾವಚಿತ್ರಗಳು Sitter ಗಿಂತಲೂ ಚಿತ್ರಿಸಿದ್ದ ಕಲಾವಿದರನ್ನೇ ಹೆಚ್ಚು ನೆನಪುಮಾಡುತ್ತವೆ. ಭಾವಚಿತ್ರ ದೃಶ್ಯಾತ್ಮಕ ಬಯೋಗ್ರಾಫಿಯಾದರೆ ಸ್ವಭಾವಚಿತ್ರ ಆಟೋಬಯೋಗ್ರಾಫಿಯ ಅನುಭವ ನೀಡುತ್ತದೆ. ರೆಂಬ್ರಾಂಟ್, ರೆನಾಯಿರ್, ಸೆಝಾನ್, ಎಲ್‌ಗ್ರೆಕ್ಕೋ, ಗಾಗಿನ್, ವ್ಯಾನ್‌ಗಾಗ್, ಪಿಕಾಸೋ, ಮೊಡಿಗ್ಲಿಯಾನಿ, ಎಂ.ಎಫ್. ಹುಸೇನ್ ಮೊದಲಾದವರ ಸ್ವಾಭಾವ ಚಿತ್ರಗಳು ಹೀಗಾಗಿಯೇ ಇಂದಿಗೂ ನಮ್ಮನ್ನು ಕಾಡಬಲ್ಲವು. ಕಂಪ್ಯೂಟರ್‌ನಲ್ಲಿ ನಿಮ್ಮ ಛಾಯಾಚಿತ್ರವೊಂದನ್ನು ಬಳಸಿ ಡವಿಂಚಿ, ವ್ಯಾನ್‌ಗಾಗ್ ಮೊದಲಾದವರ ಕುಂಚದ ನಿರ್ವಹಣೆಯ ಶೈಲಿಯಲ್ಲಿ ಭಾವಚಿತ್ರವನ್ನು 3 ನಿಮಿಷಗಳಲ್ಲಿ ಪಡೆಯುವ ವ್ಯವಸ್ಥೆಯೂ ಪ್ರಸ್ತುತ ನಮ್ಮ ನಗರಗಳಲ್ಲಿ ಪ್ರಾರಂಭವಾಗಿದೆ. The portrait Studio Easel (Fantasy Entertainment, USA) ಹೆಸರಿನ ಕಂಪ್ಯೂಟರ್ ತಂತ್ರಜ್ಞಾನದ ವ್ಯವಸ್ಥೆಯದು. ಈ ಹಿಂದೆ ಕ್ಯಾಮರಾ ಕಾಣಿಸಿ ಕೊಂಡು ಭಾವಚಿತ್ರ ಹಾಗೂ ಭೂದೃಶ್ಯ ಕಲಾಪ್ರಕಾರಗಳನ್ನು ಬೆಚ್ಚಿ ಬೀಳಿಸಿದಾಗ ವಿಶ್ವಕಲಾ ರಂಗ ಅದನ್ನು ಎದುರಿಸಿದ ಅಪೂರ್ವ ಹೆಜ್ಜೆಗಳ ಕಾರಣ ಕಲಾ ಇತಿಹಾಸ ಸುದೀರ್ಘವಾಗಿ, ವಿಶಿಷ್ಟವಾಗಿ ಬೆಳೆದುಬಂದಿದೆ.[8] ಇಂದು

ಅದೇ ಸಂದರ್ಭ ಪುನರಾವರ್ತನೆಯಾದಂತೆ ಕ್ಯಾಮರಾ ಮೂಲಕ ಕಂಪ್ಯೂಟರ್‌ನ ಕಾರಣ ಭಾವಚಿತ್ರ ಕಲೆಯಲ್ಲಿ, ಡಿಜಿಟಲ್ ಪ್ರಿಂಟ್ ತಂತ್ರಜ್ಞಾನದ ದಬ್ಬಾಳಿಕೆ ಪ್ರಾರಂಭವಾಗಿದೆ.[9] ಈ ಸಂದರ್ಭವನ್ನು ಭಾವಚಿತ್ರ ಕಲಾವಿದರು ಹೇಗೆ ಎದುರಿಸಬಹುದು? ಡಿಜಿಟಲ್ ತಂತ್ರಜ್ಞಾನವನ್ನು ಹೇಗೆ ಪೂರಕವಾಗಿ ಬಳಸಿಕೊಳ್ಳಬಹುದು? ಈ ಲಭ್ಯ ಮಾಧ್ಯಮವನ್ನೇ ಕ್ರಾಂತಿಕಾರಿಯಾಗಿ ದುಡಿಸಿಕೊಳ್ಳಲಾಗುವುದೇ? ಎಂಬ ಪ್ರಶ್ನೆಗಳು ಇನ್ನೂ ಸ್ವಲ್ಪ ಕಾಲ ನಮ್ಮ ನಡುವೆ ಕೇಳಿಬರಬಹುದು. ಇಂದಿನ ಸಮೂಹ ಮಾಧ್ಯಮಗಳಲ್ಲಿ, ಪ್ರಚಾರ ಫಲಕ, ಭಿತ್ತಿ ಪತ್ರಗಳ ಭಾವಚಿತ್ರಗಳಲ್ಲಿ ಕಾಣಿಸಿಕೊಳ್ಳುವ ವ್ಯಕ್ತಿಗಳು ತಮ್ಮ ಹೊರಗಿನ ರೂಪವನ್ನು ತೋರುತ್ತಾರಾದರೂ ಅವರೊಳಗಿನದನ್ನು ಬಿಂಬಿಸಲಾರರು. ಕ್ಯಾಮರಾ ಮೂಲಕ ಅವರನ್ನು ಕ್ಲಿಕ್ಕಿಸಿದವರ ಉದ್ದೇಶವೂ ಅದಲ್ಲ. ಹೀಗಾಗಿ ಸಾಂಸ್ಕೃತಿಕ ಅನುಭವಗಳ ಮಾರಾಟದ ಮಾರುಕಟ್ಟೆಯ ಉದ್ದೇಶಕ್ಕಾಗಿ 'ವಸ್ತು' ವಾದ ಆ ವ್ಯಕ್ತಿಗಳ ಆ ಚಿತ್ರಗಳಲ್ಲಿ ಕ್ಲಿಕ್ಕಿಸಿದವನ ತೀವ್ರತೆಯ ಒಳನೋಟಗಳಿರಲಾರವು. ಅವು "ಛಾಯಾಚಿತ್ರಗಳು" ಅಷ್ಟೇ; "ಭಾವಚಿತ್ರಗಳು" ಅಲ್ಲ. ಹೀಗಾಗಿ ಮತ್ತೆಮತ್ತೆ ನೋಡಿದಾಗ ಕಲಾವಿದನ ಮೂಲಕ ಮೂಡಿದ ಭಾವಚಿತ್ರವೊಂದು ಕಾಡಿದಂತೆ ಈ ಛಾಯಾಚಿತ್ರಗಳು ಕಾಡಲಾರವು. ಆದರೂ ಕಲಾವಿದನೊಬ್ಬ ವ್ಯಕ್ತಿಯೊಬ್ಬನನ್ನು ಬಹುಕಾಲ ನೋಡಿ ಯಾವುದೋ ಒಂದು ವಿಶಿಷ್ಟ ಸಂದರ್ಭದಲ್ಲಿ ಕ್ಯಾಮರಾ ಮಾಧ್ಯಮದಿಂದ ಗ್ರಹಿಸಿದಾಗ ಆ ವ್ಯಕ್ತಿಯ ಒಳ ವ್ಯಕ್ತಿತ್ವವನ್ನು ನಮ್ಮ ಅನುಭವಕ್ಕೆದಕ್ಕಿಸುವುದು ಸಾಧ್ಯ. ಹೀಗಾಗಿಯೇ ಪತ್ರಿಕಾ ಪ್ರಚಾರ ಸಾಮಗ್ರಿಯ ನಡುವೆ ಕಾಣುವ ಅನಾಮಧೇಯ ವ್ಯಕ್ತಿಯೊಬ್ಬನ ಭಾವಚಿತ್ರವೂ ಅವನ ವಿಶಿಷ್ಟ ಹೊರನೋಟವನ್ನೇ ಅಲ್ಲದೇ ಒಳನೋಟಗಳನ್ನೂ ಅಪರೂಪಕ್ಕೆ ನೀಡಬಲ್ಲದು.

## ಟಿಪ್ಪಣಿಗಳು

1. "The Sukranitisara", IV, 4, 76, Speaks of Portraiture as 'unheavenly' asvargya," - Ananada K. Coomaraswamy, The transformation of Nature in Art. P. 129

2. ಕಲಾವಿದನೊಬ್ಬ ಚಿತ್ರಿಸುವಾಗ Model ಆಗಿ ಕುಳಿತಿರುವ ವ್ಯಕ್ತಿಯ ಮನಸ್ಸು ಹೇಗಿರಬಹುದು? ಕಲಾವಿದನ ಮನಸ್ಸು ಹೇಗೆ ಕೆಲಸಮಾಡಬಹುದು? ಕಲಾವಿದನಿಂದ ವ್ಯಕ್ತಿಯೊಬ್ಬನ ಭಾವಚಿತ್ರ ಪೂರ್ಣಗೊಳ್ಳುವ ವೇಳೆಗೆ ವ್ಯಕ್ತಿಯಿಂದ ಕಲಾವಿದನ ಭಾವಚಿತ್ರವೂ ಮಾನಸಿಕವಾಗಿ ಮೂಡಿ ಬಂದಿರುತ್ತದೆ. ಜಿಯೋಕೊಮೆಟ್ಟಿ ಜೇಮ್ಸ್‌ಲಾರ್ಡ್‌ನ ಭಾವಚಿತ್ರವನ್ನು 18 ದಿನಗಳ ಕಾಲ ಚಿತ್ರಿಸಿದಾಗ ಆದದ್ದು ಇದೆ. ಜೇಮ್ಸ್‌ಲಾರ್ಡ್ ಪ್ರತಿ ಸಂಜೆ ಬರೆದಿಟ್ಟ ಟಿಪ್ಪಣಿಗಳ ಮೂಲಕ ಈ ಇಬ್ಬರ ಒಳಹೊರ ನೋಟಗಳು ನಮ್ಮೊಂದಿಗೆ ಪಿಸುಗುಟ್ಟಿದ ಅನುಭವ ನೀಡುವ ಪುಸ್ತಕ 'ಜಿಯಾ ಕೊಮ್ಮೆಟ್ಟಿ ಭಾವಚಿತ್ರ'.

3. **PORTRAITURE,** Encyclopedia of world art, CGRAW-HILL BOOK Co., NEW YORK, 1966

4. Baudelaire (1955) must have had Delacroix no less in mind than Rembrandt and Reynolds,among others when he wrote "The............ method, which is the special province of the colourists, is to transform the portrait into a picture........... a poem with all its accessories, a poem full of space and reveries........ Here the imagination has a greater part to play, and yet, just as it often happens that fiction is truer than history, so it can happen that a model is more clearly realized by the abundant and flowing brush of the colourist than by the Draughts man's pencil".

- Eagenio Battisti in 'Portraiture',
Encyclopedia of World Art, Newyork, 1966.

5. 'The great majority of fine portraits that have come down to us down

former generations are clothed in the costume of their own period. They are perfectly harmonious, because every thing - from costume and coiffure down to gesture, stance and smile (for each age has a department, a glance and a smile of its own) - every thing, I say, combines to form a completely viable whole.'

- Charles Baudelaire, The Painter of Modern Life and other Essays. Phidon Press Limited London N1 9PA 2001.

6. 'I am not claiming that there are as many fundamental ideals as there are individuals, for a mould gives several impressions : but in the painter's soul there are just as many ideals as individuals, because a portrait is a model complicated by an artist'

- Jonathan Mayne in the introduction of Charles Baudelaire's The Painter of Modern Life and Other Essays. Phaidon Press Limited London N1 9PA 2001.

7. ಫ್ರಾನ್ಸಿಸ್‌ಬೇಕನ್ ಡೇವಿಡ್ ಸಿಲ್ವಿಸ್ಟೆರ್ ರೊಂದಿಗಿನ ಸಂದರ್ಶನದಲ್ಲಿ "I really wanted these portraits of Michel to look like him; there is no point in doing a portrait of somebody if you're not going to make if look like him. But, being rather long and thin, that head in fact has nothing to do with what Michel's head is really like, and yet it looks more like him. At least I think it looks more like him. But that is always one of the things in painting that is really impossible to explain." ಎಂದು ಹೇಳಿರುವುದು ಭಾವಚಿತ್ರ ರಚಿಸುವ ಕಲಾವಿದನೊಬ್ಬನ ಒಳಗಿನ ಮಾತಾಗಿ ಮೂಡಿ ಬಂದಿದೆ.

8. "Although reason tells me the camera is not aimed like a gun barrel at my head, each time I pose for a photographic portrait I feel apprehensive. This is not the well-known fear, exhibited in many cultures, of being robbed of one's soul or a layer of one's personality. I do not imagine that the photographer, in order to bring the image-replica into the world, robs me of anything, But I do register that the way I ordinarily experi-

ence myself is turned around."

-Susan Sontag
Where the stress Falls
Vintage, 2003.

9. ಇಲ್ಲಿ ಜರ್ಮನಿಯ ವಿಮರ್ಶಕ ವಾಲ್ಟರ್ ಬೆಂಜಮಿನ್‌ನ ದೃಷ್ಟಿಗಮನಾರ್ಹ. ಅವನು ತನ್ನ 'The author as producer' (1934) ಪ್ರಬಂಧದಲ್ಲಿ ಮಾರ್ಕ್ಸಿಸ್ಟ್ ವಿಮರ್ಶೆ ಸಾಹಿತ್ಯ ಕೃತಿಯೊಂದಕ್ಕೆ ಸಾಂಪ್ರದಾಯಕವಾಗಿ ಒಡ್ಡುವ ಪ್ರಶ್ನೆಯನ್ನು ಪ್ರಸ್ತಾಪಿಸುತ್ತಾನೆ. ಸಾಹಿತ್ಯ ಕೃತಿಯೊಂದು ತನ್ನ ಸಮಕಾಲೀನ ಉತ್ಪಾದನಾ ಮಾರ್ಗಗಳಿಗೆ ಸಂಬಂಧಿಸಿದಂತೆ ತಾಳುವ ನಿಲುವು ಏನು? ಎಂಬ ಪ್ರಶ್ನೆಗೆ ಬದಲಿಯಾಗಿ ಬೆಂಜಮಿನ್ ಕೇಳುವ ಮತ್ತೊಂದು ಪ್ರಶ್ನೆ ಎಂದರೆ ತನ್ನ ಕಾಲದ ಉತ್ಪಾದನೆಯ ಮಾರ್ಗಗಳ ಮಿತಿಯೊಳಗೆ ಸಾಹಿತ್ಯ ಕೃತಿಯೊಂದರ ಸ್ಥಾನ ಏನು? ಎಂಬುದು. ಈ ಪ್ರಶ್ನೆಯನ್ನು ಕೇಳುವುದರ ಹಿನ್ನೆಲೆಯಲ್ಲಿ ಬೆಂಜಮಿನ್, ಇನ್ನಿತರ ರೀತಿಯ ಉತ್ಪಾದನೆಯಂತೆಯೇ ಕಲೆಯ ಸೃಷ್ಟಿಯು ಆ ಸಂದರ್ಭದಲ್ಲಿ ನಿಶ್ಚಯವಾದ ಉತ್ಪಾದನೆಯ ಕೆಲವು ತಂತ್ರಗಳನ್ನು, ಚಿತ್ರಿಸುವ ಕ್ರಮಗಳನ್ನು, ಪುಸ್ತಕ ಪ್ರಕಟಣೆಯನ್ನು, ನಾಟಕಗಳ ಪ್ರದರ್ಶನ ಇತ್ಯಾದಿಗಳನ್ನು ಅವಲಂಬಿಸಿರುತ್ತದೆ. ಈ ತಂತ್ರಗಳೆಲ್ಲ ಕಲೆಯ ಉತ್ಪಾದನಾ ಶಕ್ತಿಗಳ ಒಂದು ಅಂಗವಾಗಿರುತ್ತವೆ. ಕಲಾಸೃಷ್ಟಿಯ ಬೆಳವಣಿಗೆಯ ಹಂತವೂ ಆಗಿರುತ್ತವೆ. ಬಹು ಮುಖ್ಯವಾಗಿ ಅವು ಕಲೆಯ ಉತ್ಪಾದನೆ ಮತ್ತು ಅದರ ವೀಕ್ಷಕರ ನಡುವಿನ ಸಾಮಾಜಿಕ ಸಂಬಂಧಗಳೊಂದಿಗೆ ತಳುಕು ಹಾಕಿಕೊಂಡಿರುತ್ತವೆ, ಎಂದು ಭಾವಿಸುತ್ತಾನೆ.

ಹೆಚ್ಚಿನ ಓದಿಗೆ :

1. WORLD PREHISTORY IN NEW PERSPECTIVE
Grahame clark - cambridge university press, 1996

2. INDIAN ARCHAEOLOGY IN RETROSPECT
Proto History Archaeology of the Harrappan civilization.
edited - S. Settar and Ravikori Settar
ICHR, Manohar, 2002

3. STONE AGE PAINTING IN INDIA
- Vishnu S Wakankar, Robert R.R. Brooks
Pub. D.B. Taraporevala sons and Co., Private ltd.

4. ROCK ART OF INDIA
Edited by K.K. Chakravarthy
Pub : Arnold - Heine mann - (India) Pvt. Ltd.
New Delhi - 110029

5. THE SPEAKING TREE.
A study of indian culture and society -
- RICHARD LANNOY
OXFORD UNIVERSITY PRESS.

6. ಕರ್ನಾಟಕ ಪ್ರಾಗಿತಿಹಾಸಕಾಲದ ಕಲೆ -
- ಅ.ಸುಂದರ,
ಕರ್ನಾಟಕ ಲಲಿತಕಲಾ ಅಕಾಡೆಮಿ, ಬೆಂಗಳೂರು

7. ಕಲಾಚರಿತ್ರೆ
ಸಂ:ಎನ್. ಮರಿಶಾಮಾಚಾರ್
ಕರ್ನಾಟಕ ಶಿಲ್ಪಕಲಾ ಅಕಾಡೆಮಿ. 2002

8. ಕನ್ನಡದ ದೃಶ್ಯಕಲೆಯ ಪ್ರಾರಂಭದ ಚಹರೆಗಳು.
http:/www/vishva kannada.com/subramanyam htm 23-6-2001

9. ಭೀಂ-ಬೇಟ್ಕಾಕಲ್ಲಾಸರೆಯ ಚಿತ್ರಗಳು

- ಕೆ.ವಿ. ಸುಬ್ರಹ್ಮಣ್ಯಂ, ಪ್ರಜಾವಾಣಿ ಸಾಪ್ತಾಹಿಕ ಪುರವಣಿ, 16-6-1991.

10. STYLES IN PAINTING -
- Paul Zucker
Dover publications, Inc, Newyork, 1963

11. PAINTINGS OF BYGONE YEARS
- karl khandalavala
vakils, Feffer and Simons Limited, Bombay 1991.

12. LEONARDO DAVINCI
- Sigmund Freud
vintage Books, New yourk, 1947.

13. ದಖನಿ ಚಿತ್ರಕಲೆ

- ಎಸ್.ಕೆ. ಅರುಣಿ,

ಕರ್ನಾಟಕ ಲಲಿತಕಲಾ ಅಕಾಡೆಮಿ. 2001

14. STUDIES IN EARLY INDIAN PAINTING.
- Motichandra
Asia Publishing House, Bangalore, 1970.

15. MICHELANGELO,
life letter and poetry
translated by George bull
Oxford, New york, 1987

16. DAVID SYLVESTER
Inter views with Francis Bacon
Thames and Hudson, london, Reprinted 2002.

17. THE IMPRESSIONISTS AT FIRST HAND
- edited by Bernard Denvir
Thames and Hudson, london, 1987

18. INDIAN MINIATURES
- Mario Bussagli
Published - Paul Hamlyn, london, 1969

19. ಕಿತಾಬ್-ಎ-ನೌರಸ್
- ಇಮ್ಮಡಿ ಇಬ್ರಾಹೀಮ್ ಆದಿಲ್ ಶಾಹ್,
ಕನ್ನಡಕ್ಕೆ : ಅಬ್ದುಲ್ ಮಜೀದ್ ಖಾನ್,
ಪ್ರ : ಕರ್ನಾಟಕ ಉರ್ದು ಅಕಾಡೆಮಿ ಬೆಂಗಳೂರು 1997

20. ENCYCLOPEDIA OF WORLD ART
Mcgraw-Hill Book Co. New York, 1966

21. ಕರ್ನಾಟಕದ ಚಿತ್ರಕಲೆ
- ಶಿವರಾಮಕಾರಂತ
ಪ್ರ : ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ,
ಮೈಸೂರು, 1972

22. ಸಗರ ನಾಡದರ್ಶನ
ಸಂ : ಎ.ಕೃಷ್ಣ,
ಸುರಪುರ, 1985

23. ಚಿತ್ರಕಲಾ ಪ್ರಪಂಚ
ಸಂ. ಅ.ಲ. ನರಸಿಂಹನ್ ಮತ್ತು ಎನ್. ಮರಿಶಾಮಾಚಾರ್
ಕರ್ನಾಟಕ ಲಲಿತಕಲಾ ಅಕಾಡೆಮಿ.

24. TANJAVUR PAINTINGS
of the Maratha Period, Delhi

25. ಮಾನಸೋಲ್ಲಾಸ
ಪ್ರಧಾನಸಂಪಾದಕರು : ಡಾ ಎಂ.ಎಂ. ಕಲಬುರ್ಗಿ,
ಪ್ರಸಾರಾಂಗ : ಕರ್ನಾಟಕ ವಿಶ್ವವಿದ್ಯಾಲಯ ಧಾರವಾಡ, 1998

26. FREUD, CONFLICT AND CULTURE
Edited : Michael S. Roth
vintage books, New york 2000

27. POLLY BORLAND AUSTRALIANS
National Portrait Gallery
london, 2000

28. OIL ON CANVAS
- Keith Patrick
BBC books, london, 1997

29. ಬಾನಯ್ಯಗರುಡಾದ್ರಿ
- ಬಸವರಾಜ ಉಪ್ಪಿನ,
ಕರ್ನಾಟಕ ಲಲಿತಕಲಾ ಅಕಾಡೆಮಿ ಬೆಂಗಳೂರು 1995

30. SELF PORTRAIT
- Man Ray
A Bulfinch press book, newyork, 1999

31. ಶ್ರೀ ತತ್ವನಿಧಿ :
ಸಂಪುಟ 1 : ಶಕ್ತಿನಿಧಿ
ಸಂ : ಪ್ರೊ ಎಂ. ಮಾದಯ್ಯ
ಓರಿಯಂಟಲ್ ರಿಸರ್ಚ್ ಇನ್ಸ್‌ಟಿಟ್ಯೂಟ್
ಮೈಸೂರು ವಿಶ್ವವಿದ್ಯಾಲಯ, ಮೈಸೂರು 1997

32. GIACOMETTI PORTRAIT
- James lord
The Museum of Modern Art, Newyork
(ಈ ಪುಸ್ತಕವನ್ನು ಓದಲು ಅನುಕೂಲ ಕಲ್ಪಿಸಿ ಡಾ|| ಅ.ಲ. ನರಸಿಂಹನ್ ನೆರವಾಗಿದ್ದಾರೆ.)

33. THE JOURNAL OF EUGENE DELA CROIX
Edited : Hubert wellington,
phaidon press ltd. london 1951

34. ಫೋಟೋರಿಯಲಿಸಂ.
- ಕೆ.ವಿ. ಸುಬ್ರಹ್ಮಣ್ಯಂ,
ಕರ್ನಾಟಕ ಲಲಿತಕಲಾ ಅಕಾಡೆಮಿ, ಬೆಂಗಳೂರು 1995

35. **The Origins of Form in Art**
- Herbert Read
thames and Hudson, london 1965.

36. ENCOUNTERS WITH GREAT PAINTERS
Harry N. Abrams, Inc Newyork, 2000

37. GREAT DRAWINGS
- Paul J. Sachs
Washington Square Press, Ins 1961.

38. THE PAINTED WORD
- Tom Wolfe
Bantom Books, london, 1987.

39. THE SOCIAL HISTORY OF ART (4 Volumes)
- Arnold Hauser,
Vintage Books, Newyork, 1985.

40. THE TRANSFORMATION OF NATURE IN ART
- Ananda K. Coomaraswamy
Munshiram Manoharlal Publishers Pvt Ltd., New Delhi,

41. LIVES OF THE PAINTERS, SCUPLTORS AND ARCHITECTES
- Giorgio Vasari,
David Camp bell Publishers Ltd., London W1 V3 PF, 1927

42. Christian and Oriental Philosophy of Art
- Ananda K. Coomaraswamy
Dover Publications, Inc., Newyork, 1956.

43. Modern Prints and Drawings.
- Paul J. Sachs
Alfered. A. Knopf, Newyork, 1954.

44. ಕೆಳದಿ ಬಸವರಾಜ ಸಂಕಲಿಸಿದ ಶಿವತತ್ವರತ್ನಾಕರ
ಸಂ.ಪ್ರೊ.ಮಲ್ಲೇಪುರಂ ಜಿ. ವೆಂಕಟೇಶ
ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

45. The Earth Mother
- Pupul Jayakar
Penguin Books, New Delhi, 1989.

46. Chitrasutra of the Vishnu Dharmottara
- C. Siva Ramamurthy
Kanak Publications, New Delhi, 1978.

47. The Painter of Modern life and other Essays
- Charles Baudelaire
Phaidon press Ltd., London NI 9PA, 2001.

48. After the great Mughals.
- Edited : Barbara Schmitz
Marg, 2002.

49. ನೋಟಪಲ್ಲಟ
- ಎಚ್.ಎ. ಅನಿಲ್‌ಕುಮಾರ್,
ಅಭಿನವ, ಬೆಂಗಳೂರು, 1998,

50. Lectures on Art
- John Ruskin,
All worth press, Newyork, 1996

51. Ways of Seeing
- John Berger,
BBC and Penguin Books, 1972

52. The Portrait in the Renaissance
- John Pope Hennessy
Bollingen series XXXV-12
Princeton University Press, 1989

53. Varahamihira's Brhat Samhita
- Edited : M. Ramakrishna Bhat
Pub : Motilal Banarasilal, Delhi, 1987

54. Where the Stress Falls
- Susan Sontag
Vintage, London Swiv 2SA, 2003.

55. The artist and his model
ISO Drawings, Pablo Picasso,
Dover Publications, INC, New York, 1996

56. Movie-Star, Portraits of the Forties,
- John Kabal, Dorer, New York,

57. The living Tradition
- K.G. Subramanyan
Seagull, Calcutta

58. The creative circuit
- K.G. Subramanyan
Seagull, Calcutta, 1992

59. The Mythic image
- Joseph Campbell,
MJF Books, New York, 1974.

60 Picasso Paints A Portrait
- David Douglas Duncan
Pub : Abrams



*ಚಿತ್ರ-37 : ಸ್ವ-ಭಾವಚಿತ್ರ, ಕೆ.ಕೆ. ಹೆಬ್ಬಾರ್,*
*ಮಾಧ್ಯಮ : ತೈಲವರ್ಣ, 1980.*
*(ಸಂಗ್ರಹ : ವೆಂಕಟಪ್ಪ ಆರ್ಟ್ ಗ್ಯಾಲರಿ, ಬೆಂಗಳೂರು)*



ಚಿತ್ರ-38 : ಸ್ವ-ಭಾವಚಿತ್ರ, ಎಂ.ಎಫ್. ಹುಸೇನ್,

ಮಾಧ್ಯಮ : ಚಿತ್ರವಸ್ತ್ರ, (ಸಂಗ್ರಹ : ಹುಸೇನ್‌ಸಂಕಲನ, ಬೆಂಗಳೂರು).

ಚಿತ್ರ-78 : ರವಿವರ್ಮನ ಪ್ರೆಸ್‌ನಿಂದ ಮೂಡಿಬಂದ ಓಲಿಯೋಗ್ರಾಫ್-
- ಭಾವಚಿತ್ರ : ಸರೋಜಿನಿನಾಯ್ಡು.
(ಸಂಗ್ರಹ : ಕೆ.ವಿ.ಎಸ್.)



ಚಿತ್ರ-40 : ಭಾವಚಿತ್ರ, - ಎಂ.ಬಿ. ಪಾಟೀಲ್,
ಮಾಧ್ಯಮ : ತೈಲವರ್ಣ





ಚಿತ್ರ-34 : ಶ್ರೀ ರಾಮಕೃಷ್ಣ ಪರಮ ಹಂಸ,
ಕಲಾವಿದರು : ಎಸ್.ಎಂ. ಪಂಡಿತ್,
ಮಾಧ್ಯಮ : ತೈಲವರ್ಣ, 1971.



ಚಿತ್ರ-43 : ಡಾ|| ರಾಜಕುಮಾರ್ ಭಾವಶಿಲ್
ಶಿಲ್ಪಿ - ವೆಂಕಟಾಚಲಪತಿ,
ಮಾಧ್ಯಮ : ಜೇಡಿಮಣ್ಣು, 2004.



ನಮ್ಮ ಮುಖಗಳ ಪರಸ್ಪರ ಮುಖಾಮುಖಿಗೆ ಮುನ್ನುಡಿಯಾಗಬಲ್ಲ ದೃಶ್ಯಕಲೆಯ ಇತಿಹಾಸ ಮತ್ತು ಸಮಕಾಲೀನ ಸಂದರ್ಭಗಳ ಗ್ರಹಿಕೆಗಳಿರುವ ಪ್ರಬಂಧ ಇದು. ಭಾವಚಿತ್ರ - ಶಿಲ್ಪಗಳ ವಿಶಿಷ್ಟ ಪರಂಪರೆಯ ಒಳನೋಟಗಳ ಜತೆಗೆ ವರ್ತಮಾನ ಹಾಗೂ ಭವಿಷ್ಯದ ಸಾಧ್ಯತೆಯ ಹೊಳಹುಗಳೂ ಅನುಭವಕ್ಕೆ ಬರುವ ಬಗೆಯ ಹಿನ್ನೋಟ, ಮುನ್ನೋಟಗಳೆರಡೂ ಇಲ್ಲಿವೆ.

ಕನ್ನಡ ದೃಶ್ಯಸಂಸ್ಕೃತಿಯ ಬಹುಮುಖ್ಯ ಇತಿಹಾಸಕಾರ, ವಿಮರ್ಶಕರಲ್ಲಿ ಒಬ್ಬರಾಗಿರುವ ಶ್ರೀ ಕೆ.ವಿ. ಸುಬ್ರಹ್ಮಣ್ಯಂ ಅಕಾಡೆಮಿಯ ಗೌರವ ಪ್ರಶಸ್ತಿ ಪುರಸ್ಕೃತರು . ವಿಮರ್ಶೆಯ ವಿನಯವನ್ನು ಅರಗಿಸಿಕೊಂಡು ಇತಿಹಾಸ ಹಾಗೂ ಸಮಕಾಲೀನತೆಗಳನ್ನು ಬೆಸೆದು ರೂಪಿಸಿರುವ ದೀರ್ಘ ಪ್ರಬಂಧ ಇದು. ಅವರು ಪ್ರವಾಸ, ಪರಾಮರ್ಶನಗಳ ಜತೆ ಜತೆಗೇ ಸಮಕಾಲೀನ ಸಂದರ್ಭವನ್ನು ತೀವ್ರತೆಯಿಂದ ಗ್ರಹಿಸಿರುವುದರ ಫಲ ಈ ಪ್ರಕಟಣೆ.



ಕರ್ನಾಟಕ ಲಲಿತಕಲಾ ಅಕಾಡೆಮಿ
ಕನ್ನಡ ಭವನ, ಜೆ.ಸಿ. ರಸ್ತೆ, ಬೆಂಗಳೂರು-560 002
ದೂರವಾಣಿ : 080-22480297